ನೋಡಿದೆ (ಜಂಗಾಳ್ಕ. ೨ ಮುನ್ನುಡಿ). ೫. ಸಕಳಮಂ ಕೌತುಕದಿ. ನಡೆಸುತ ಸಕಳದೊಳು ನಡೆಯದ ಸುಜಾಣನು ಸಕಳವಳಿಯಲು ಸಕಳದೊಳು ತಾನಳಿಯದಿಹ ನಿತ್ಯ (ಬಸವು. ೫೦–೪೪); ತೊಡಿಗೆಯಿಂದಿರ್ವರು ದೇವಪೂಜೆಯು ಮಾಡಿ ನಡೆಸಿದರಾಗವೋಕ್ತಿಯಲಿ (ಮೋಹತ. ೩೦–೪); ದೇವರನ್ನು ಮೂಲ ದೇವರ ಗುಡಿಯು ಮುಂದೆ ಬೀಳಬಟ್ಟೆಯ ಮೇಲೆ ಕುಳ್ಳಿರಿಸಿ ಗುಡಿಯೊಳಗೆ ಪೂಜೆ ನಡೆಸುತ್ತಾರೆ (ನನ್ನೂರು. ೫೦). ೬. ನುಡಿದ ಭಾಷೆಯನಿಂತು ನಡೆಸಲು ಬಸವನೇ ಬಲ್ಲ (ಬಸವು. ೩೭–೩೭); ನಮ್ಮ ಕರ್ತವ್ಯ ಒಡೆಯನ ಅಪ್ಪಣೆಯನ್ನು ತಲೆಬಾಗಿ ನಡೆಸುವುದು (ಜಂಗಾಳ್ಕ. ೪೭). ೭. ಸಟೆಯಿಲ್ಲದಂತೆ ಪ್ರಪಂಚುವಿಲ್ಲದಂತೆ ವೈಶಿಕವಿಲ್ಲದಂತೆ ನಡೆಸಯ್ಯಾ (ಬಸವ. ೬೦); ನಿಮ್ಮ ನೆಂದೂ ಅಗಲದಂತೆಮಾಡಿ ನಡೆಸಯ್ಯ (ಮಹಾದೇ. ಬ. ೧೫–೧೯); ನಿಚ್ಚಂ ಪ್ರಿಯದಿಂದಂ ನೋಡುವರ್ ಮನ್ನಿಸಿ ನಡೆಸುವರೆಮ್ಮತ್ತೆವಿರ್ ದೇವಕೀ ದೇವಿಯರ್ (ಜಗವಿ. ೧೨–೧೦೭); ಅರಸೊಲಿದು ನಡೆಸಿದರೆ ಸಿರಿಯಕ್ಕು ಜಸವಕ್ಕು ಕರಿತುರಗ ಬಲವು ಹಿರಿದಕ್ಕು ಮುನಿದರೆ ಕರ ನಾಶವಕ್ಕು (ಸರ್ವಜ್ಞ. ೭೩೩). ೮. ಘಡ ತೊಲಗು ಕೌರವಕೃತಾಂತನ ಪಡೆಗೆ ಪಾರಣೆಯೊಗಳೀಗಳೆ ನಡೆಸುವೆನು(ಕುಮಾರವ್ಯಾ.ದ್ರೋ. ಪರಿ. ೨೮೮). ೯. ಸಾಧುತ್ವಮಂ ಕೆಡಿಸಿ ನಡೆ[ಪಾಠಾಂ. ಡ]ಸುವ ದುರಾಚಾರೆ ಕಪಟನಾಟಕತತಿಗೆ ತಾನೆ ನೆಲೆಯೆನಿಸುವಳ್ (ಕಾದಂಪೂ. ೫೫೩); ಇನಿತುಂ ಮೋಹಂ ಕೇಳೀತನಮೇಲಿಂ ಪಿರಿದುಮೆನ್ನೊಳುಂಟಪ್ಪುದಱಿಂದನಿಯತಿಕೆಯಿಂದೆ ನಡೆಸಲ್ಕಿನಿತಾದುದು ಶಿಕ್ಷೆಗೆಟ್ಟ ಕಾರಣದಿಂದಂ (ಧರ್ಮಾಮೃ. ೨–೮೧). ೧೦. ಅಟ್ಟು; ತಳ್ಳು: ಹೊಡೆದು ಹೊಡೆಚೆಂಡಾಡಿ ರಿಪುಗಳ ಗಡಣವನು ಯಮರಾಜಧಾನಿಗೆ ನಡೆಸುವೆನು (ಕುಮಾರವ್ಯಾ.ಆ. ೮–೮). P ಈ ಧಾತು ಅನೇಕ ಕಡೆ ನಾಮ ಪದದೊಡನೆ ಸೇರಿ ವಿಶಿಷ್ಟವಾದ ಧಾತುವಾಗಿ ಬೇರೆಬೇರೆ ಅರ್ಥಗಳಲ್ಲಿ ಬಳಕೆಯಾಗುತ್ತದೆ. ಉದಾಹರಣೆಗೆ 'ಉತ್ಸವ ನಡೆಸು', 'ಶಾಲೆ ನಡೆಸು' ಇತ್ಯಾದಿ.

**ನಡೆಸಿಕೊಡು, ನಡಸಿಕೊಡು** = ೧. ಮಾಡಿಕೊಡು; ಮಾಡು: ನೀನು ಸೂಚಿಸಿದಂತೆಯೇ ನಡೆಸಿಕೊಡುತ್ತೇನೆ (ವಚಭಾ. ೪). ೨. ಪಾಲಿಸು; ಈಡೇರಿಸು: ನಿನ್ನಲ್ಲಿ ಭರವಸೆಯಿಟ್ಟು ಒಂದು ಮಾತು ಹೇಳುತ್ತೇನೆ. ಅದನ್ನು ನೀನು ನಡಸಿಕೊಡಬೇಕು (ವಚಭಾ. ೬). [ ನಡೆ$_1$ + – ಇಸು$_3$ ]

**ನಡೆಯುಡುಗು** (ಕ್ರಿ). ನಡೆಯಲಾರದಾಗು; ಚಲನೆ ಇಲ್ಲದಂತಾಗು: ನಡೆಯುಡುಗಿ ಮುಪ್ಪಾಗಿ ಕಾಂತಿ ಮಸುಳಿಸಿ . . . ಬೇಱೊಂದೆಸೆಯ ಕಡೆಯೊಳಿಳಿವಂತಾದುದೀಗ (ಹಚಕಾ. ೩–೭೪); ಭಕ್ತಿ ಚಿತ್ತಮನೋವೆ ಕಂಪಿಸುತೆ ನಡೆಯುಡುಗೆ ಮನವಕ್ಕಱಿಂ ಕರಗೆ (ಬಸರ. ೩–೧೧೧); ನಡೆನಡೆದು ಕಡೆಕಡೆಗೆ ನುಡಿಯಡಗೆ ನಡೆಯುಡುಗೆ (ಶ್ರೀಲೂರ. ೧೫೦–೩೩೦). [ ನಡೆ$_1$ + ಉಡುಗು$_1$ ]

**ನಡೆಯೂಡು** (ಕ್ರಿ). ಚೆನ್ನಾಗಿ ತಿನ್ನಿಸು: ನಡೆಯೂಡೆ ಮದ್ದು ವಿಷವೊಡಲಿಂಗೆ ಹಿತವೆಂಬ ನುಡಿಯಂತೆ ಸುಖವಿಲ್ಲ ಪುಣ್ಯವುಂಟಾಳಿದ ಹಲವೆಡೆಯ ಸುಕ್ಷೇತ್ರಂಗಳೊಳಗೆ (ಹಚಕಾ. ೧೦–೩೫). [ ನಡೆ$_3$ + ಊಡು$_1$ ]

**ನಡೆಲಿಂಗ** (ನಾ). [ವೀಶೈ]-ಚಲಿಸುವ ಲಿಂಗವೆಂದು ಭಾವಿಸಲಾದವನು; ಜಂಗಮ: ಬಡವರೆಂದೆನಬೇಡಾ ಲಾಂಛನಧಾರಿಯನು ಕಂಡು ಸ್ನೇಹದಿಂದವರ ಪೂಜೆಯ ಮಾಡುವುದು ನಿಜವಡಗಿದ ರೂಪು ನಿರ್ವಯಲ ಸ್ಥಾನ ನಡೆಲಿಂಗ ಜಂಗಮ (ಬಸವ. ೪೧೫). [ ನಡೆ$_1$ + ಲಿಂಗ ]

**ನಡೆವಕ್ಕಿ** (ನಾ). (ಚಿತ್ತಾಕರ್ಷಕವಾಗಿ) ನಡೆಯುವ ಹಕ್ಕಿ; (ಮನೋಹರವಾಗಿ) ಚಲಿಸುವ ಪಕ್ಷಿ; ಹಂಸ: ನಡೆವಕ್ಕಿಯ ನಲ್ಮೆಯ ಪೊಣರ್ವಕ್ಕಿಯ ನುಡಿವಕ್ಕಿಯ . . . ಬಳಗಂ ಬಳಸಿದುದಾ ನೃಪಸತಿಯಾ (ಜಯಕಾ. ೨–೧೮); ನಡೆವಕ್ಕಿ ನುಡಿವಕ್ಕಿ . . . ಗಱಿಗಣ್ಣಕ್ಕಿಗಳಾ ನೆಲದೆಡೆಯ ಬನದೊಳಿರುತಿಹವು (ಕುರಾಕಾಂ. ೨–೫೦); ಆ ವನದ ಮಧ್ಯದೊಳು ನಡೆವಕ್ಕಿ ನುಡಿವಕ್ಕಿ ಪಾವನತ್ವವನೈದಿ ಜೀವಿಪುವು ಭಯವನುಳಿದು (ಪ್ರಭುಪು. ೩–೦೪). 'ನುಡಿವಕ್ಕಿ' ಪರಾ. [ ನಡೆ$_1$ + ಹಕ್ಕಿ$_1$ (<ಪಕ್ಕಿ$_1$) ]

**ನಡೆವಡು** (ಕ್ರಿ). ಹೋಗು; ಚಲಿಸು; ಗಮಿಸು: ತಾಂ ತನಗೆ ಹಯಂ ತಡೆವಿಟ್ಟ ಪಾವೆಂತಂತು ನಡೆವಟ್ಟು ತನ್ನಿಚ್ಚೆಯಿಂ ಪೋಗೆ (ರಾಮಾಶ್ವ. ೧೩೮–೦೩). [ ನಡೆ$_2$ + ಪಡು$_1$ ]

**ನಡೆವಣಿಗ** (ನಾ). ಪಾದಚಾರಿ; ಕಾಲಾಳು: ನಡೆವಣಿಗ ಭೋಳಾಯ್ಲ ಸೂಳಾಯ್ತುಡಪವಳ ಬಳಿಗಾಱ ಕಮ್ಮಟ ನುಡಿಗ ಕುಂಬಱ ಕಂಚುಗಾಱರ ಕೇರಿ ಮೆಱೆದಿಹವು (ಸಾಳ್ವಭಾ. ೨–೮). [ ನಡೆ$_1$ + – ವಣಿಗ ]

**ನಡೆವಲೆ** (ನಾ). ಒಂದು ಬಗೆಯ ಬಲೆ: ಇಡುವಲೆ ಸಿಡಿವಲೆ ಕೆಱುವಲೆ ನಡೆವಲೆ . . . ಬಿಡುವಲೆಗಳಿನಿಪ್ಪುವೆಸೆದುವಾ ಬೇಂಟೆಗಾರರೊಳ್ (ಶಬಶಂ. ೩–೨೪). [ ನಡೆ ? + ಬಲೆ$_1$ ]

**ನಡೆವಳಿ$_1$**, ನಡವಣಿ, ನಡವಳಿ, ನಡಾವಳಿ (ನಾ). ೧. ನಡೆಯುವಿಕೆ; ನಡಿಗೆ: ನಡೆವಳಿಗಳಿಂದೆ ಪೊಡವಿಯನು ನಗ್ಗಿಪ ಹಸ್ತಿಗಡಣ (ನವಮೋ. ೩೦–೨೭). ೨. ನಡವಳಿಕೆ; ವ್ಯವಹಾರ; ನಡತೆ; ವರ್ತನೆ: ಬಿಕ್ಕೆಯಂ ಬೇರುಮನುಂಡಡವಿಯೊಳಗಿರ್ಪ ಮುನಿಗಳ ನಡೆವಳಿಯತ್ತೆತ್ತ ಯುವತಿ ಜನದನುರಾಗಂ (ಕಾದಂಪೂ. ೮೧೮); ಪಟಿಯಂ ಕೇಳ್ದೆನೊ ಮೇಣ್ಣಡವಟ್[ಳ]ಯಂ ತಪ್ಪಿದೆನೊ ಕಾಣೆ ಕಣ್ಣಿಂದಂ ಕೂರ್ತಟಲ್ದಿವರಂ ಬಗೆದೆನೊ ಪಚ್ಚಟಿದೆನೊ ವೇಟ್ಕೂಡಿ ನಿನ್ನೊಳಂಗಾಧಿಪತೀ (ಗದಾಯು. ೫–೧೪); P ಇದನ್ನು ಪ್ರಾಸಕ್ಕಾಗಿ 'ಟ' ವನ್ನಾಗಿ ತಿದ್ದಿಕೊಂಡಿರಬಹುದು; ಹಗಲಿರುಳು ಉದಯ ಬೈಗುಗಳು ಧರ್ಮವು ಎಂಬಿವು ಮನುಷ್ಯರ ನಡೆವಳಿಯನಱಿಪುವು (ಪಂಚತಂ. ೧೭೨–೧೧); ಪರವಧುಗಳಿವುದುವಿಹಂ ಪರವಟಗುಂ ನಿನ್ನ ಮಹಿಮೆಗಿದು ನಡೆವಳಿಯೇ (ಪಂರಾಮಾ. ೯–೦೪೫); ನಡೆವಳಿಯೊಳ್ ತನ್ನ ಸಮಂಬಡೆವಾರುಂ ನಡೆದರಿಲ್ಲ (ಪುಷ್ಪಪು. ೦–೩೯); ಹರಿಯ ಚಕ್ರವ ತುಡುಕಿಸುವೆ ವಾನರಪತಾಕನ ರಥವ ಹಿಂದಕೆ ಮುರಿಯಲಿಸುವೆನು ಮಹಿಮರಿಬ್ಬರ ನಡೆವಳಿಯ ಕೆಡಿಸಿ (ಕುಮಾರವ್ಯಾ.ಭೀ. ೧–೪೧); ನಡೆವಳಿಯ ನೋಡಿದಿರೆ ಲೋಗರ ಮಡದಿಯರು ತನ್ನವರು ಠಕ್ಕಿನ ಕಡಲು ಕೃಷ್ಣನ ನಂಬಲಿಹಪರವಿಲ್ಲ (ಕುಮಾರವ್ಯಾ.ದ್ರೋ. ೧೪–೦೮); ನುಡಿಗೆ ನಾಚಿದನರಸ ಹಂಸದ ನಡೆ[ಪಾಠಾಂ. ಡ]ವಳಿಗೆ ಮೆಚ್ಚಿದನು (ನಳಚ. ೨–೨೧). ೩. ಸಂಪ್ರದಾಯ; ಪದ್ಧತಿ; ರೂಢಿ: ಹಿರಿಯರೆಲ್ಲರ್ನಡೆದ ನಡೆ[ಪಾಠಾಂ. ಡ]ವಳಿಯನೊಲ್ಲೆನೆಂಬುದು ಬಲ್ಲತನವಲ್ತು (ವೃಷವಿ. ೩–೫೨ವ.) ೪. (ಸಂಘ, ಸಂಸ್ಥೆ ಮುಂತಾದುವುಗಳ ಅಧಿವೇಶನಗಳಲ್ಲಿ ನಡೆದ) ಕಾರ್ಯಕಲಾಪ, – ಕಾರ್ಯಕ್ರಮ ಮುಂತ್ತು ಅದರ ವರದಿ: "ಕಾರ್ಯ; ವರ್ತನೆ; ನಡೆವಳಿ" (Proceeding. ಇಂಕನಿ). **ನಡವಣಿ**: ೨. ಧರ್ಮದ ನಡವಣಿಗೆ ಮೆಚ್ಚಿದೆನು ಸತ್ಯವು ಕೆಡದವೊಲು ರಕ್ಷಿಸಿದೆ (ತಿಮ್ಮ.ಆ. ೮–೬೪). **ನಡವಳಿ**: ೨. ಅವರವರ ದಯ್ಯದಿಂದಮವರ ವರಾಗಮದೊಳವರ ನಡವಳಿಗಳ [ಪಾಠಾಂ. ಕಥೆಗಳೊಳಂ] ನೋಡುವಡವೆ ದೂಷಿಸಿದಪುವಿನ್ನವರನ್ನರ್ನುಡಿಯೆ ಮುಳಿವರಾ ಸಮಯದವರ್ (ಸಮಪ. ೮–೨೦೭); ಅಳವಟ್ಟ ಪಿರಿಯ ಸಿರಿ ನಲ್ಲಳ ನಡ [ಪಾಠಾಂ. ಡೆ] ವಳಿಯೊಳ್ಪು . . . ಮನಂಗೊಳ್ಳುತಿರೆ ಪಲಕಾಲಮರಸುಗೆಯ್ಯುತ್ತಿರ್ದೆ್ಯ (ವರ್ಧಪು. ೧೦–೭೯); ಕುಲವಧುವಿನ ನಡವಳಿಯೊಳ್ ಕುಲಮುಮಾ ಚಲಮುಮಾ ಪತಿವ್ರತಾಗುಣದಿಂದಂ ನೆಲಸಿಕ್ಕುಮ್ (ಸೌಇಇ. XX, ೨೪೮–೪೯; 1228); ವನಧಿಪನ ಗಾಂಭೀರ್ಯ ರವಿನಂದನನ ನಡವಳಿ ಧರೆಯ ಸೈರಣೆಯಿನಿತು ದಶರಥಸಾರ್ವಭೌಮಂಗಲ್ಲದಿಲ್ಲೆಂದ (ತೊರರಾ. ೧–೩–೨೭). **ನಡಾವಳಿ**: ೨. ನಮ್ಮ ನಡಾವಳಿಗೆ ನಮ್ಮ ಪುರಾತರ ನುಡಿಯೆ ಇಷ್ಟವಯ್ಯ (ಸಿದ್ಧವ. ಕ. ೨೬೦–೫೫೭); ಜಗತ್ತಿನ ರೀತಿನೀತಿ ನಡತೆ ನಡಾವಳಿಯ ಅನುಭವ ನನಗೆ ಸಾಕಷ್ಟಾಗಿದೆ (ಪರಿಚೇ. ೪೫); ಇದೆಲ್ಲಕ್ಕಿಂತಲೂ ಪ್ರಭಾಕರನ ಮನಸ್ಸನ್ನು

ಗಾಸಿ ಮಾಡಿದುದು ನಿರ್ಮಲೆಯ ನಡಾವಳಿ (ತೇಪೋಆ. ೦೦೮); ಅವರಿಗೆ ಒಳ್ಳೇ ನಡಾವಳಿಯ ಬಯಕೆಯೂ ಹೆಚ್ಚಾಗುವ ಹಾಗೆ ತಕ್ಕ ಕಾರಣವನ್ನೇ ನೋಡಿ ಕೊಡಬೇಕು (ಮುಂಬಯಿ. ೩-೪೩); ಕ್ರಮಬದ್ಧ ಜೀವನವೂ ನೀತಿ ನಡಾವಳಿಗಳೂ ವೊಳೆಯುವಂತೆ ಪ್ರೋತ್ಸಾಹಿಸಿದರು (ಕಪಪು. ೬-೧೩೦); ೩. ಕುಮ್ರಿ ಕಡಿಯುವ ನಡಾವಳಿಯು ಧಾರವಾಡಜಿಲ್ಲೆಯಲ್ಲಿಲ್ಲ (ಕಭಾಗ. ೩೪); ಬೈಲುಸೀಮೆಯಲ್ಲಿ ಮಳೆ ಕಡಿಮೆ ಬೀಳುವದರಿಂದ ವಾಳಿಗೇಮನೆಗಳನ್ನು ಕಟ್ಟುವ ನಡಾವಳಿ ವಿಶೇಷವುಂಟು (ಮುಂಬಯಿ. ೯-೧೧೮). ೫. ಧರ್ಮಸ್ಥಳದಲ್ಲಿ ಹನ್ನೆರಡು ವರ್ಷಗಳಿಗೊಮ್ಮೆ ನಡೆಯುವ ಒಂದು ಉತ್ಸವ,-ಹಬ್ಬ : ಉಡುಪಿಯಲ್ಲಿ ಎರಡು ವರ್ಷಗಳಿಗೊಮ್ಮೆ ನಡೆವ ಪರ್ಯಾಯ, ಪಡುಬಿದ್ರೆಯಲ್ಲಿ ಜರಗುವ ಡಕ್ಕೆಬಲಿ, ಧರ್ಮಸ್ಥಳದಲ್ಲಿ ಹದಿನೆರಡುವರ್ಷಗಳಿಗೊಮ್ಮೆ ನಡೆವ 'ನಡಾವಳಿ' ಎಂಬ ಉತ್ಸವ . . . ಇವುಗಳು ಪ್ರಾಮುಖ್ಯವಾದುವುಗಳಾಗಿವೆ (ತುಳುನಾ. ೨೫೩).

[ ನಡೆ₁ + – ವಳಿ₁. / ತಮಿ. ನಟವಟ, ನಟ್ಪಟಿ; ಮಲ. ತೆಲು. ನಡವಡಿ; ತುಳು. ನಡಾವಳಿ, ನಡುವಡಿ ]

**ನಡೆವಳಿ₂** (ನಾ). ನಡೆಮಡಿ ; ನಡೆಯುವ ದಾರಿಗೆ ಹಾಸುವ ಮಡಿಬಟ್ಟೆ : ಸುಗ್ಗಿಯೊಳ್ ಮದುವೆಯೆನೆ ಕುಳಿರಗಸ ನಡೆವಳಿಯ ಹಿಗ್ಗಿನಿಂ ಬಿಡಿಸುವನು ತೊಳೆದಡೆಯ ಕೊಳೆಯಂ (ಕಾಲೂರ. ೬೪-೧೩೪): "ನಡೆವಳಿ=ನಡೆಬಟ್ಟೆ (ಮದುವೆಯಲ್ಲಿ ಮಂಟಪದ ಸುತ್ತು ಹಾಕುವ ಬಟ್ಟೆ)" (ಕಾಲೂರ. ಅಡಿಟಿ).

[ ನಡೆ₁ + ವಳಿ₆ (<ವಲ್ಲಿ₂) ]

**ನಡೆವಳಿಕಾರ** 'ನಡೆವಳಿಕಾಟಿ' ನೋ.

**ನಡೆವಳಿಕಾರತನ** (ನಾ). ನಡತೆ ; ನಡವಳಿಕೆ ; ಸಂಪ್ರದಾಯ : ಶ್ರೀರಾಜ ಒಡೆಯರವರ ಸನ್ನಿಧಾನವು ಒಡ್ಡೋಲಗಕ್ಕೆ ಬಿಜಯಮಾಡಿದೊಡನೆಯೇ ಆಸ್ಥಾನಿಕರೆಲ್ಲ ಇದಿರೆದ್ದು ತಮ್ಮ ತಮ್ಮ ಮಾನಾನುಗುಣವಾಗಿ ನಮಸ್ಕರಿಸಿ ಗೌರವಿಸಿಕೊಳ್ಳಬೇಡವೆ ? ಓಲಗದ ನಡೆವಳಿಕಾರತನವಿದು (ಬಿಟ್ಟಿಅ.೩೮-೧೭).

[ ನಡೆವಳಿಕಾರ (<ನಡೆವಳಿಕಾಟಿ) + – ತನ ]

**ನಡೆವಳಿಕಾರ್ತಿ** (ನಾ). ನಡವಳಿಕೆಯನ್ನು ತಿಳಿದವಳು ; ಆಚಾರ ವಿಚಾರಗಳನ್ನು ಬಲ್ಲವಳು : "ನರೀ, ನಾರೀ, ಈ ೨ ನಡೆವಳಿಕಾರ್ತಿ" (ಕಾಶಕ್ಕ. ೨೪೭). [ ನಡೆವಳಿಕಾರ (<ನಡೆವಳಿಕಾಟಿ) + – ತಿ₁ (<-ಇತ್ತಿ) ]

**ನಡೆವಳಿಕಾಟಿ**, ನಡೆವಳಿಕಾರ, ನಡವಳಿಕಾಟಿ, ನಡೆವಳಿಕಾರ (ನಾ). ೧. ನಡವಳಿಕೆಯನ್ನು ತಿಳಿದವನು ; ಆಚಾರ, ವ್ಯವಹಾರಗಳನ್ನು ಬಲ್ಲವನು ; ನಡತೆವಂತ : ಕಾಟಿಕ್ಕೆ-ನಡೆವಳಿಕಾಟಿಂ, ನುಡಿವಳಿಕಾಟಿಂ . . . ಪಗೆಕಾಟಿಂ, ಬಗೆಕಾಟಿಂ (ಶಮದ. ೦೯೯ ಪ್ರಯೋ). **ನಡವಳಿಕಾರ** : ೧. "ನರನ್, ನರ್ತಾ, ನ್ನಾ, ನರಃ, ಈ ೪ ನಡವಳಿಕಾರಂ" (ಕಾಶಕ್ಕ. ೨೪೭). **ನಡವಳಿಕಾಟಿ** : ೨. (ದೇವಸ್ಥಾನ, ಮನೆ ಮೊದಲಾದುವುಗಳ) ವ್ಯವಹಾರಗಳನ್ನು ನೋಡಿಕೊಳ್ಳುವವನು,-ಮೇಲ್ವಿಚಾರಣೆ ನಡೆಸುವವನು : ಪೂಜಾರಿಗ ಪರಿಚಾರಕರೆಳಿಗಾದ ನಡವಳಿಕಾಟರ ಜೀವಿತಕ್ಕಂ . . . ಮಹಾಜನಂಗಳು ಬಿಟ್ಟ ದತ್ತಿ (ಮೈಅರಿ. ೦೯೩೨, ೪೬-೩೫; 1181); ರಾಜಾರ್ತ್ಥವನೂ ತೀಟಿಸಿಕೊಡುವರು ನಡವಳಿಕಾಟಿ ಪ್ರಭುಗಳು (ಸೌಇಇ. IX-ii, ೪೩೩-೬೩; 1408); ತಿಂಮಣರಾಯರ ಮನೆಯ ನಡವಳಿಕಾಟಿಂ ಹೊಂನಪ್ಪನಾಯಕರು (ಮೈಅರಿ. ೦೯೩೫, ೨೩-೨; 1618). **ನಡೆವಳಿಕಾರ** : ೧. "ಸರ್ತಾ, ಸರಕಃ, ಈ ೨ ನಡೆವಳಿಕಾರಂ"(ಕಾಶಕ್ಕ. ೬೩).

[ ನಡೆವಳಿ₁ + – ಕಾಟಿ ]

**ನಡೆವಳಿಕೆ**, ನಡವಳಿಕೆ, ನಡಾವಳಿಕೆ (ನಾ). ೧. ನಡತೆ; ನಡೆನುಡಿ ; ಆಚಾರ, ವ್ಯವಹಾರ ; ವರ್ತನೆ: ಆದರೆ ಕೃತಿಯು ಏನಾದರೂ ನುಡಿವಳಿಕೆ; ಚಾರಿತ್ರ್ಯವು ನಡೆವಳಿಕೆ. ನುಡಿವಳಿಕೆಯು ಅತ್ಯುಚ್ಚವಾಗಿ ನಡೆವಳಿಕೆಯು ಅದರ ಕನ್ನಡಿಯಂತಿದ್ದರೆ, ಆ ಮನುಷ್ಯನು ಸಾಧುವೆಂದೆನಿಸಿಕೊಳ್ಳುವನು (ಸಾಹಿಸಂ. ೩); ಅಂದೆ ನೆಲವು ಪಡೆದೀತು ಅಮರಜೀವಂತಶಾಂತಿಯನ್ನು ಎಂದು ನಾಡ ನಡೆವಳಿಕೆಯಲ್ಲಿ ನೆಲೆಗೊಂಬುದೊಂದೆ ನಿಜವು (ಅರಳು.೧೭೫-೨); ನಡೆವಳಿಕೆಗಳು ಮತ್ತೂ ಉತ್ತಮಗೊಂಡು (ಮುನಿಮೂ. ೭೯). ೨. ರೂಢಿ ; ಪದ್ಧತಿ ; ಸಂಪ್ರದಾಯ : ನಮ್ಮ ಸೀಮೆಯಲ್ಲಿ ನಡೆವಳಿಕೆಗೆ ಬಂದಿರುವ ಅಳತೆಯು ಯಾವುದನ್ನು ಅನುಸರಿಸಿರುವುದು (ಭೂಮಿಅ. ೦). ೩. (ಸಂಘ, ಸಂಸ್ಥೆ, ಸಭೆ ಮೊದಲಾದುವುಗಳ ಅಧಿವೇಶನಗಳಲ್ಲಿ ನಡೆದ) ಕಾರ್ಯಕಲಾಪ,-ಕಾರ್ಯಕ್ರಮ ಮತ್ತು ಅದರ ವರದಿ : ರಾಯಲ್ ಸೊಸೈಟಿಯ ನಡೆವಳಿಕೆಗಳು (Proceedings of Royal Society. ಇಂಕನಿ). **ನಡವಳಿಕೆ** : ೧. ಅಂದಿನ ತನ್ನ ನಡವಳಿಕೆಯಲ್ಲೇನೋ ಕಳಂಕವಿದೆಯೆಂದು ಮನಸ್ಸು ಹೇಳುತ್ತಿತ್ತು (ಮುರುಕು. ೩೭); ಆದರೆ ನಿಮ್ಮ ನಡವಳಿಕೆಗಳು ಅರ್ಥವಾಗದೆ ಹೋದರೆ ಅವು ತಪ್ಪು ಮಾಡುತ್ತವೆ (ಕಾಲಮ. ೧೧೨); ಅರ್ಥವಾಗದ ನಡವಳಿಕೆಯು ಕೆಕ್ಕೆ (ವಾತ್ಸಲ್ಯ. ೪೮); ವಿದ್ಯಾರ್ಥಿಗಳು ತಮ್ಮ ನಡವಳಿಕೆಯನ್ನು ಉತ್ತಮಪಡಿಸಿಕೊಳ್ಳಬೇಕೆಂಬ ಹುರುಪಿನಲ್ಲಿರುವಾಗ ಅವರನ್ನು ತಿದ್ದುವುದೂ ಶಿಕ್ಷಕನ ಕರ್ತವ್ಯ (ಕ್ರಿಯಾಶಿ. ೨೮). ೩. ನಡವಳಿಕೆಗಳು (Proceedings. ಪತ್ರಿನಿ. ೬೪). **ನಡಾವಳಿಕೆ** : ೨. ವ್ಯವಸಾಯದಲ್ಲಿ ಹಿಂದಿನ ನಡಾವಳಿಕೆ ಹೋಗಿಲ್ಲ (ರೂಢಿ).

[ ನಡೆವಳಿ₁ + – ಕೆ./ತಮಿ.ನಟವಟಕ್ಕೈ ; ತೆಲು. ನಡವಡಿಕ ]

**ನಡೆವಳಿಗ** (ನಾ). (ಅರಮನೆ, ದೇವಸ್ಥಾನ ಮೊದಲಾದುವುಗಳ) ವ್ಯವಹಾರಗಳನ್ನು ನೋಡಿಕೊಳ್ಳುವವನು,-ಮೇಲ್ವಿಚಾರಣೆ ನಡೆಸುವವನು ; ಪಾರಂಪತ್ತೆಗಾರ : ಪಡೆವಳ್ಯರ ಪರದೇಶಾಧೀಶರ ನಡೆವಳಿಗರ ನಲ್ಮೆಯ ಸಚಿವರ . . . ಪೊಸಪೂವಲಿಗುಡುವ ಮಡದಿಯರ ವೊತ್ತಂ ಕಣ್ಗೊಪ್ಪಿದುದಾವುದಯದೊಳು (ಜಯಕಾ. ೧೨-೧೩). [ ನಡೆವಳಿ₁ + – ಗ₂ ]

**ನಡೆವಳಿದಪ್ಪು** (ನಾ). ನಡೆವಳಿಕೆಯ ತಪ್ಪು ; ನಡತೆ, ಆಚಾರ, ವ್ಯವಹಾರಗಳಲ್ಲಿಯ ದೋಷ : ನಡೆವಳಿದಪ್ಪು ಪ್ರಾಪಂಚಿಕರಿಗಿಲ್ಲದೆ ಜ್ಞಾನಮಯರಿರದು (ಗಗಚಾ. ೦೬-೪೬). [ ನಡೆವಳಿ₁ + ತಪ್ಪು₂ ].

**ನಡೆವೆಣ** (ನಾ). ನಡೆಯುವ ಹೆಣದಂಥವನು ; ಸತ್ತಂತೆ ಇರುವವನು ; ನಿರ್ವೀರ್ಯ ; ಜೀವಚ್ಛವ : ನಡೆವೆಣನ ನುಡಿವೆಣನ ಸಂಸಾರವೇನವನ (ಬಸವ. ೦೩೭); ಸಂಸಾರವೆಂಬ ಮಹಾವ್ಯಾಧಿ ಬಾಧಿಸಿ ನಡೆವೆಣನ ಮಾಡಿ ಕಾಡುತ್ತಿದೆ ನೋಡಯ್ಯಾ (ವಚರ. ೪೩-೦೭೦); ಕೇಳು ನಡೆವೆಣನೇ ದರಿದ್ರನು ಸಾಲದೆನಿಸಿದ ದಕ್ಷಿಣೆಯ ಯಜ್ಞಾಳಿ ನಿಷ್ಫಲವೆಂದು ನುಡಿದನು ರಾಯ ಕೌಂತೇಯ (ಕುವ್ಯಾಅ. ೨೩-೪೩); ತೊಡೆಯನೇಟಿಲು ಬಂದ ಮಗನನು ಮಡದಿ ಪಾತಕಿ ಬೈದು ಭಂಗಿಸಿ ಜಡಿದು ನೂಕಲು ನೋಡುತ್ತಿದ್ದೆನು ಕಾಣದವನಂತೆ ನಡೆವೆಣನಪ್ಪನ್ನೇನ ಕೇಳುವೆ (ನಿಭಾಗ. ೯-೭-೨೦); ಸತ್ತೆಡೆಯಾಡುವ ನಡೆವೆಣನೊಲು ಕೈಹೊತ್ತುಕೊಂಡಿದೆ ತೆರಳಿದೆನು (ಮೋಹತ. ೯-೨೦); ಗುಣ ಜಪ್ಪನ ಕುಲ ರೂಪುಗುಂದಿದ ನಡೆವೆಣಕೀಯಲಾಗದು ಪೆಣ್ಣ (ಹರಿಬ. ೫-೦೭). 'ನುಡಿವೆಣ' ಪರಾ. [ ನಡೆ₁ + ಪೆಣ ]

**ನಡೆವೆಱು** (ಕ್ರಿ). ನಡಗೆಯನ್ನು ಹೊಂದು ; ಚಲನೆಯನ್ನು ಪಡೆ : ಪ್ರಾಯಂ ಕೂಸಾದೊಡೇನೀ ಸಾಯಕಂ ಕೂಸಕ್ಕುಮೆ ! ಜಗದೆ ನೀವೆ ಬಲ್ಲವಳ್ಳರ್ ! ಆ ನಡೆವೆತ್ತ ಸೀರ್ಪುಟಾಗಿವೆ ! (ರಾಮಾಶ್ವ. ೦೩೪-೨೦).

[ ನಡೆ₂ + ಪೆಱು₁ ]

**ನಡೆಸರ** 'ನಡೆಸಾರ' ನೋ.

**ನಡೆಸಾರ**, ನಡೆಸರ (ನಾ). ೧. (ನದಿ, ಕಂದಕ ಮೊದಲಾದುವನ್ನು ದಾಟಲು ಕಟ್ಟುವ) ಕೃತಕವಾದ ಮರ, ಬೊಂಬು ಮುಂತಾದುವುಗಳಿಂದ ಕಟ್ಟುವ ಸೇತುವೆ: ಕೋಟೆಯನ್ನು ಹತ್ತುವುದಕ್ಕೆ ಈ 'ಸಾರ'ಗಳನ್ನು ಕಟ್ಟುತ್ತಿದ್ದರು . . . ಸಾರ ಕಟ್ಟುವುದನ್ನು ಅನೇಕರು ನೋಡಿರಬಹುದು. 'ನಡೆಸಾರ' ಎಂಬುವು ಅಗಳನ್ನು ದಾಟಿಹೋಗುವುದಕ್ಕಾಗಿ ಉಪಯೋಗವಾಗು

ತ್ತಿದ್ದವು (ಕರ್ಣಾಜ. ೫೮). ೨. ಕೋಟೆ ಮೊದಲಾದುವನ್ನು ಏರಲು ತಯಾರಿಸಿದ ಒಂದು ಸಾಧನ : ದುರ್ಗಕ್ಕೆ ನಿಚ್ಚಣಿ ಸಾಚುಗಂದೊಳೆ ವೀರಸೇತು ನಡೆಸಾರಂ ಬದ್ಧರಂ . . . ಪಡಿಗೋಂಟೆಯೆಂಬ ಬಹುಕೋಟಾ ಯಂತ್ರಸಾಮಗ್ರಿ ತಿಂತಿಣಿಗೊಂಡಾಂತಿರೆ (ಅಜಂಪು. ೧೧-೬೩); ನಡೆಸಾರಂ ನೆಲವಾಳಿಗೆ ಪೆಡಕೆಡವುವ ಡೆಗ್ಗೆ ಬದ್ದಿರಂಗಳಿನಾರ್ದಂದೆಡೆಗುಡದಧಟಂ ಕೋಂಟೆಯನಡರ್ದಾ ರಿಪುಭಟರನಿಕ್ಕಿದು ಕಲಿಕಾವಂ (ತ್ರಿಪುವಿ. ೫-೧೧).

**ನಡೆಸರ :** ೨. ಭೈರವ ಬದ್ದರದ ನಡೆಸ [ಪಾಠಾಂ. ವ]ರದ ಡಬ್ಬುಕ ಡೆಂಕಣಿಗಳನು ತೂಱಿದರು ನಭಕೆ (ತೊರಠಾ. ೬-೧೧-೧೪). 'ನಡೆಸೇತು', 'ಸಾರಮಾರಿ' ಪರ್ಯಾ. [ ನಡೆ$_1$ + ಸಾರ$_1$ ]

**ನಡೆಸು** 'ನಡೆಯಿಸು' ನೋ.

**ನಡೆಸೇತು** (ನಾ). ನಡೆಯುವ ಸೇತುವೆ; ಚಲಿಸುವ ಸೇತುವೆ : ಕೇತನಾವಳಿಯೆತ್ತೆ ವಾದ್ಯ ಘೂರ್ಣಿಸೆ ನಡೆಸೇತುಗಳಂತಾನೆ ನಡೆಯೆ ಭೂತಳ ತುಂಬಿ ಪ್ರಾಯ್ದುಳಬರೆ ಬಂದು ವಿನೀತಪುರದೊಳಾಗ ಹೊಕ್ಕ (ಭರಜ. ೫೮-೩೭). 'ನಡೆಸಾರ' ಪರ್ಯಾ. [ ನಡೆ$_1$ + ಸೇತು ]

**ನಡೆಸೊಡರು** (ನಾ). (ಯಾರಾದರೂ ಓಡಾಡುವಾಗ ಕೈಯಲ್ಲಿ ಹಿಡಿದು ಮುಂದೆ ದಾರಿ ತೋರಿಸಲು ಉಪಯೋಗಿಸುವ) ದೀವಟಿಗೆ : ನಿನ್ನಂಗಣದಲ್ಲಿ ಬೊಗಳುವ ಶ್ವಾನನಯ್ಯಾ ನಿನ್ನ ಮನೆಯ ನಡೆಸೊಡರಯ್ಯಾ (ವಚಸಂ. ೧೯೬-೪೮). [ ನಡೆ$_1$ + ಸೊಡರು (<ಸೊಡರ್) ]

**ನಡೆಹ, ನಡಹ** (ನಾ). ೧. ನಡೆಯುವಿಕೆ; ಚಲಿಸುವಿಕೆ : "ಗತಿಃ, ವಿಂಖಃ, ವಿಹಾರಃ, ಪರಿಸರ್ಪಃ, ಪರಿಕ್ರಮಃ–ಈ ೫ ನಡೆಹ" (ಹಲಾಯು. ೦೩೦-೪೧). **ನಡಹ :** ೨. ನಡೆದುಕೊಳ್ಳುವಿಕೆ; ವ್ಯವಹರಿಸುವಿಕೆ : ಸ್ವತಂತ್ರ ವೃತ್ತ್ಯಾನಂ ವಿವೃತ್ತಿಯೆನಲೋಲಿದಂತೆ ನಡಹಮುಕ್ಕುಂ (ಮಂಗರಾ. ೦೩೩-೩೦). [ ನಡೆ$_1$ + – ಹ$_2$ ]

**ನಡ್ಡಿಮೂಗು** (ನಾ). ಚಪ್ಪಟೆಯಾದ ಮೂಗು; ತಗ್ಗಿದ ನಾಸಿಕ : "ಅವಟೀಟಃ, ಅವನಾಟಃ, ಅವಭ್ರಟಃ, ನತನಾಸಿಕಃ – ೪ ಕುಳಿಮೂಗಿನವನ ಹೆಸರುಗಳು, ಚಿಕ್ಕಮೂಗುಳ್ಳವನು, ನಡ್ಡಿಮೂಗುಳ್ಳವನು" (ಸಿದ್ಧಾಂತಿ. ೦೫೭). [ ←ತೆಲು. ನಡ್ಡಿಮುಕ್ಕು ]

**ನಡ್ಯೆ** (ನಾ). ಜೊಂಡು ಹುಲ್ಲಿನ ರಾಶಿ : "ನಡ್ಯಾ, ನಡಸಂಹತಿಃ – ಹೊಲಗದ್ದೆಗಳ ಬಗುವುಗಳಲ್ಲಿಯೂ, ತೋಟದ ಸಾರಿಗೇ ಬದುವುಗಳಲ್ಲಿಯೂ ಗುಂಪಾಗಿ ಬೆಳೆದಿರುವ ಹುಲ್ಲುಗಳ ಸಮೂಹ" (ಸಿದ್ಧಾಂತಿ. ೦೫೩). [ ಸಂ. ನಡ್ಯಾ ]

**ನಡ್ವಲ, ನಡ್ವಳ** (ನಾ). ಜೊಂಡುಹುಲ್ಲು ಹೆಚ್ಚಾಗಿ ಬೆಳೆಹ ಭೂಮಿ : "ನಡ್ವಾನ್, ನಡ್ವಲಃ, ನಡಪ್ರಾಯಃ–ಶತ್ರಹುಲ್ಲು ಬಹಳವಾಗಿರುವ ದೇಶದ ಹೆಸರು, ಹುಲ್ಲುನೆಲದ ಪ್ರಾಂತ್ಯವು" (ಸಿದ್ಧಾಂತಿ. ೮೪). **ನಡ್ವಳ :** "ನಡ್ವಲಂ, ನಳಸಂಯುತಂ–ಈ ೨ ನಾ(ಣ)ನಲುಳ್ಳ ಭೂಮಿ" (ಹಲಾಯು. ೨೬-೪); "ನಡ್ವಳಂ ನಳಯುತಂ ನಳ್ಳುನೆಲನಕ್ಕು" (ಮಂಗಕೊ. ೨೮-೨). [ ಸಂ. ]

**ನಡ್ವಳ** 'ನಡ್ವಲ' ನೋ.

**ನಣ್ಕೆ** (ನಾ). ನಂಟತನ; ಬಾಂಧವ್ಯ : ಸಂಸಾರದಪಾಯಮುಮಂ ನಿನ್ನಱಿವಿನ ಬಲ್ಮೆಯುಮಂ ಧೈರ್ಯದೊಳಾದ ನಣ್ಕೆಯುಮಂ ಕಂಡಂ (ಜೀವಸಂ. ೨೩-೧೭೭). [ <ನಣ್ಪು ? ]

**ನಣ್ಪು** (ನಾ). ೧. ನಂಟು; ಬಾಂಧವ್ಯ; ಸಂಬಂಧ : "ನಣ್ಪು ನಂಟು" (ಕರ್ಣಾನಿ. ೨೩); ಕುಲಜನು ಮಲ್ಲಂ ನಣ್ಪಿನ ಬಲಮುಂ ತನಗಿಲ್ಲ ಕಣ್ಣಮೇಳದನಾರೊಳ್ ನೆಲಸಿರನೆಲ್ಲಿಯುಮು[ವಪ]ಂ ಚಲವೆಂದು ಶ ಪತ್ತುವಿಡದದೊಂದುಂಟು ಗುಣಂ (ಕವಿರಾ. ೩-೧೬೨); ಬೆಳ್ಗಟ್ಟಿಯ ನರಸರ್ಕಳೇಱುವುದಂ ಕಂಡುದಱಿಂದುತ್ತಮಕುಲದವರ್ಗಳ್ಗೆ ಕುಲಜರಲ್ಲದವರೊಡನೆ ಮದುವೆಯೊಳ್ ತೊಟ್ಟ ಷಣ್ಪುಗಳಕ್ಕುಂ (ವಡ್ಡಾರಾ. ೮೭-೦೩); ಸುಯೋಧನನನೆನಗೊಳ್ಳಿಕೆಯ್ದು ಕೃತಮಂ ಪೆಱಗಿಕ್ಕಿ ನೆಗಟ್ಟಿ ವಹಾಸೆ ಷಣ್ಪಿನ ನೆವದಿಂದೆ ಪಾಂಡವರನಾನೊಳವೊಕ್ಕೊಡೆ ನೀಮೆ ಪೇಸಿರೇ (ಪಂಪಭಾ. ೯-೬೮); ರಾಗದಿಂದಿನ್ನಿವರ್ಗೆ ಮದುವೆಯುಂ ಮಾಟ್ಪುದೆಂದಟ್ಟಿದಂ ನಿಮ್ಮನುಜನ್ಮಂ ನಿಮ್ಮ ನಣ್ಪುಂ ಬಯಸಿ ಪದೆಪಿನಿಂದೆಮ್ಮ ವಿದ್ಯಾಧರೇಂದ್ರಂ (ಶಂರಾಮಾ. ೧೦-೧೧೪); ಎನ್ನವರೆಂದು ಪುತ್ರಪಿತೃಮಿತ್ರ ಕಳತ್ರದ ನಣ್ಪು ನಾಡೆ ಸೋವಂ ನಿನಗುಂಟುಮಾಡೆ (ಜೀವಸಂ. ೬೮-೧೨); ಪೆಂಪಿನ ಸೊಂಪಿನ ನಣ್ಪನಾಳ್ದು ಪೊಂಗೊಡನನವರ್ಮಚಿದಂತೆಸೆವುವಾ ಲಲಿತಾಂಗಿಯ ಪೀವರಸ್ತನಂ (ಕಾವ್ಯಸಾ. ೩೦೫); ನಿನ್ನಯ ಮಱುಕಕೆ ಒಡಮಱಗಿದೆನಾನ್ ಎಮ್ಮಯ ನಣ್ಪೆಂದಾನ್ ಸೆಳೆಗೊಂಡೆನ್ (ಬದ್ಧಪ್ರ. ೦೭-೩೪೦). ೨. ಸ್ನೇಹ; ಕೆಳೆ : ನೋಡು ನಣ್ಪಂ ನಿಮಗಮೆಮಗಮಾಮ್ನಾಯದಿಂ ಬಂದುದಿಂತೀ ಜಿನಧರ್ಮಂ (ಆದಿಪು. ೨-೨೦); ಪಗೆಗೆ ಕಣಿಯೊಂದುಂಟೇ ನಣ್ಪಿಂಗವಾಗರಮುಂಟೆ ನೀಂ ಬಗೆಯ ಪಗೆಯುಂ ನಣ್ಪುಂ ಕೆಯ್ಕೊಂಡ ಕಜ್ಜದಿನಲ್ತೆ ಪುಟ್ಟುಗುಮರಸುಗಳ್ಗೆ (ಪಂಪಭಾ. ೧೩-೧೦); ಒರ್ಮೆ ಬಂದೆನಗೆ ಮಾಟ್ಪುದು ಪೆರ್ಮೆಯ ನಿಮ್ಮ ನಣ್ಪಿನಿಂ ಜನಿಯಿಸಿದೀ ಕದರ್ಥನೆಗೆ ಸೈರಿಪುದು (ಕಾದಂಊ. ೧೯೩); ಪಲಕಾಲದ ರಾಕ್ಷಸವಾನರವಂಶದ ನಣ್ಪಿನ್ನಿದವಱಿದುದೆಂಬುದು ಲೋಕಂ (ಶಂರಾಮಾ. ೦೦-೦೬೨); ಮತ್ಕೊರ್ವ ನೀನೀಗಳಾಕೆಯ ನಣ್ಪನೇಕೆ ಮಾಣ್ದೆಯೆಂದಾ ಕೆಳೆಯಂಗಿಂತೆಂದಂ (ಲೀಲಾವ. ೨-೦೦೧೭). ೩. ನಂಬಿಕೆ; ವಿಶ್ವಾಸ : ಆಗಳಾ ಮಾನವೇಂದ್ರನ ಮದಗಜಮಂ ಸದೆವಂತೆ ಮದಗಜಮುಂ ಮಾಱಿದೇವನಾರ್ಪಿಂ ಸದೆಯೆ ಭಕ್ತವ್ರಜಂ ಕಂಡು ನಣ್ಪನೊಳಕೊಂಡು ಕೊಂಡಾಡುತ್ತುಮಿರೆ (ವ್ಯಪವಿ. ೦೨-೩೮೭). ೪. ಪ್ರೀತಿ; ಅನುರಾಗ: "ನಣ್ಪುನಲ್ಲೆಯುಂ ಪ್ರಸರವೆಂಬುದು" (ಹಲಾಯು. ೦೩೫-೨೪); ಪಾಂಡುರ ಕೀರ್ತಿಯೆ ನೆಗಲ್ಗುಂ ಪಾಂಡುತನೂಭವರ ನಣ್ಪುಂ ನೆಗಟ್ಗುಮೆ ಬಱಿಯಂ (ಜಗವಿ. ೦೫-೫೩); ಪಡೆಯದೆ ಬರ್ಕುಮೇ ಸುತನ ವಕ್ತ್ರಮನೀಕ್ಷಿಪ ಲಲ್ಲೆಗೈವ ನಣ್ಪಿಡಿದನುರಾಗದಿಂ ನಗಿಸುವಳ್ಕಱಿಳೊಳಪ್ಪವ . . . ಅಡಿಗಡಿಗಂ ತೊದಳ್ನುಡಿಯನಾಲಿಪ ಸೈಪು ಸರೋರುಹೇಕ್ಷಣೇ (ವ್ಯಪವಿ. ೨-೩೩); ತಾರೇಶಂ ನಣ್ಪಂ ಮು[ಮ]ತ್ತಾ ರೋಹಿಣಿಯಲ್ಲಿ ಕೂರ್ಪನವಳೇ ಧನ್ಯಳ್ (ನರಜ. ೩೩-೦೨೦). [ ನಂಟು$_1$ + – ಪು$_2$/ತಮಿ. ನಣ್ಪು; ತೆಲು. ನನ್ಪು, ನನುವು, ನನುವು ]

**ನಣ್ಪುಗೆ ?** (ಕ್ರಿ). (?) : ಅನ್ನೆಗಂ ಮುಂಬಯ್ತರಿರ್ವರುಂ ಬಂದದು ಕಾಣದೆ ಮಾಣದೆ ತಮ್ಮೊಳೋರೊರ್ವರುಂ ನಣ್ಪುಗೆ ಕಣ್ಬರಿಗೆಟ್ಟು ಇಱಿಯಿಱಿದು ತಮ್ಮೊಳರ್ವರುವಂಜಿಯುಮೆಯಿಂ ಬಿಟ್ಟಿರಲ್ಕೆ (ನೇಮಿಪು. ೨-೬೦೭). [ P ಇದು 'ನಣ್ಪುಗೆಟ್ಟು' ಎಂಬುದರ ಸ್ಖಲಿತ ರೂಪವಿರಬಹುದು ]

**ನಣ್ಪುಗೆಯ್** (ಕ್ರಿ). ಸಂಬಂಧವನ್ನುಂಟುಮಾಡು; ಅಳವಡಿಸು : ಕಳಿಯಂ ಪತ್ತಿಸಿ ರಾಗಮಂ ನಿಲಿಸಿ ನುಣ್ಪುಂ ನಣ್ಪುಗೆಯ್ದುಂಪನಿರ್ಕಳಿಗೊಂಡೊಟ್ಟಜೆಯುಂ ನಿವಿರ್ಚಿ . . . ಗೋವಳಠಾಯುಂ ಕೊಟಲೂದಿದಂ ನೆಗಟ್ವಿನಂ ಮಾಧುರ್ಯಶೂರ್ಯಸ್ವನಂ (ಜಗವಿ. ೫-೨). [ ನಣ್ಪು + ಕೆಯ್$_1$ ]

**ನಣ್ಪುನೆತ್ತರ್** (ನಾ). ನಂಟಿನ ರಕ್ತ; ಸಂಬಂಧಿಗಳ ನೆತ್ತರು : ನೆನೆಯೆಮ್ಮ ದುರ್ವಿಧಿಯ ಅಣ್ಣಂದಿರಿರ್ವರನ್ ಸಮಸಾವು ಸತ್ತರ್ ನಣ್ಪುನೆತ್ತರನಱಿದು, ಓರೊರ್ವರಾ ಕಯ್ಯಿನೊರ್ಪಗಲ್ ಕೊಲೆಯಿನ್ (ಅಂತಿಗೊ. ೩-೪೭). [ ನಣ್ಪು + ನೆತ್ತರ್ ]

**ನಣ್ಪುವೆಱು** (ಕ್ರಿ). ವಿಶ್ವಾಸವನ್ನು ಹೊಂದು; ನಂಬಿಕೆಯನ್ನು ಪಡೆ : ಕುಸುಮ ವಿಲೇಪನಾದಿ ಬಹುವಸ್ತುಗಳಂ ಮಿಗೆ ಕೊಟ್ಟು ನಣ್ಪುವೆತ್ತೆಸೆವನ ನೊರ್ಪನಂ ಚರನನೊಲ್ದನುಯಾಯಿಯನಿತ್ತು . . . ಕಳುಪಿದಂ (ವ್ಯಪವಿ. ೯-೫). [ ನಣ್ಪು + ಪೆಱು$_1$ ]

**ನತ** (ಗು.) ೧. ಬಾಗಿದ ; ಬಗ್ಗಿದ ; ವಕ್ರವಾದ. 'ನತಚಂಚು' ಪರಾ. **೨.** ಎರಗಿದ ; ನಮಸ್ಕರಿಸಿದ ; ವಂಣಿದ : **ಅತಿವಿಶದಯಶೋವೃತ್ತಂ ನತಸಕಳಾರಾತಿಜನವಿತಾನಂ ಮತ್ತಂ ವಿತತಶ್ರೀಸಂಪತ್ತಂ ಶತಮಖ ಸದೃಶಾನುಭಾವನೊಲವಿಂ ಪೆತ್ತಂ** (ಕವಿರಾ. ೨-೪೪) ; ನತನಾನಾಮರಮೌಳಿ ರತ್ನಕಿರಣಂ ನಾನಾಪ್ಸರಃಕೇಕರದ್ಯುತಿ ನಾನಾಚಮರೀಜವಾಯು ಸಭೆಯಂ ತಳ್ತೊಪ್ಪಯ್ಕಲಿರ್ದಂ ಜಗತ್ಪತಿಯೊಡ್ಡೋಲಗದೊಳ್ (ಜಗವಿ. ೧-೨೬) ; ನತನಾನಾವನಿಪಾಲವೌಳಿಮಣಿಮಾಲಾಸಂಘಸಂಘಟ್ಟನೋದ್ಧತರೇಣುವ್ರಜ ವರ್ಣಪೂರರಚಿತಂ ರಾಜಾಲಯಪ್ರಾಂಗಣಕ್ಷಿತಿಯಾಗುತ್ತಿರೆ ನಿಚ್ಚವಿಂತರಸು ಗೆಯ್ಯುತ್ತಿರ್ಪಂ . . . ತಚ್ಚೇಚರಾಧೀಶ್ವರಂ (ಶಾಂತೀಶ್ವ. ೬-೫) ; ನತ ಸಂತತಿಚಿಂತಾಮಣಿ ಭುವನಸ್ತುತಲಿಂಗಂ ತಾನಿದೆಂದು ಪೊಗಳ್ದಂ ಭೂಪಂ (ರಾಜಶೇ. ೧೩-೫೦). **೩.** ಕಂಗ್ಗಿದ ; ತಗ್ಗಿದ. 'ನತನಾಸಿಕ' ಪರಾ. **೪.** ಶರಣಾದ. 'ನತಜನ' ಪರಾ. (ನಾ). **೫.** ಬಾಗಿದುದು ; ವಕ್ರವಾದುದು : "ವಕ್ರಂ, ವೃಜಿನಂ, ಭಂಗುರಂ, ಅವಿದ್ಧಂ, ವೇಲ್ಲಿತಂ, ನತಂ, ಜಿಹ್ಮಂ . . . ಊರ್ಮಿಮತ್–ಈ ೧೨ ಕೊಂಕಿದುದು" (ಹಲಾಯು. ೧೦೬-೧೧) ; "ನತಂ, ನಮ್ರಂ, ಬಂಧುರಂ–ಈ ೩ ಎಱಗಿರ್ದುದು" (ಹಲಾಯು. ೧೨೫-೭೫) ; "ನಮ್ರಮೆನೆ ನತಮೆನಲ್ಕೆಱಗುವುದು" (ಮಂಗರಾ. ೧೩೪-೬೩). **೬.** ನಮಸ್ಕರಿಸಿದವನು ; ನಮಸ್ಕಾರ ಮಾಡಿದವನು : ನತನಾಗಿ ಕೃಷ್ಣನಿರೆ ಕುರುಪತಿಯೆಂದು (ನೇಮಿಪು. ೧೧-೨೩) ; ನತನಾದನಲ್ತೆ ಕಾಣಾತ್ತತಿರಾಗದೆ ಚಂದ್ರಭೂತಿ ಕಂದರ್ಪಮಹೀಪತಿಗೆ (ಕುಸುಮಾ. ೮-೩) ; ಬೇಡಿದುದನಿತ್ತು ಸಲಹುವೆನಂಜಲೇವುದೆನೆ ಕೃತಕೃತ್ಯನಾಗುತಂ ನಂಬಿಯಣ್ಣಂ ನಿಂದು ನತನಾಗಿ ಶಂಭುವಂ ಹಾಡತೊಡಗಿದನಂದು (ನಂಬಿರ. ೬-೧೪೬); ಮಂದರಗಿರಿ ಧೈರ್ಯನೆಂದೆನಿಪ ಪ್ರಭೇಂದುಮುನಿಪಗೆ ನತನಹೆನೂ (ಧನ್ಯಕು. ೮); ಹರುಷದಿಂ ಮುಳುಗೆ ಗರ್ಭಂ ಜಾಱೆ ಪುರುಷತ್ವ ತ್ವರಿತದಿಂದ ವರನಾವರಿಸೆ ಸುರಜಾಲತ್ರ್ಯಂಬಕೆ ನತರಾದರು (ಏಕೋಪು. ೧೩-೫೭). **೭.** ಒಂದು ಗ್ರಹಕ್ಕೂ ಮತ್ತು ಖಗೋಳ ಮಧ್ಯರೇಖೆಗೂ ಇರುವ ಅಂತರ. 'ನತಕೋನ' ಪರಾ. [ ಸಂ. ]

**ನತಕೋನ** (ನಾ). "(ನಕ್ಷತ್ರ ಮೊ.ಗಳ) ಕ್ಷಿತಿಜದ ಕೆಳಗಿನ ಕೋನದೂರ : ನತಿ ; ಅವನತಿ . . . ನತಕೋನ" (Depression. ಇಂಕನಿ).

[ ನತ + ಕೋನ (<ಕೋಣ್ ) ]

**ನತಚಂಚು** (ನಾ). ೧. ಬಾಗಿದ ಕೊಕ್ಕು. ೨. ಬಾಗಿದ ಕೊಕ್ಕನ್ನುಳ್ಳುದು: ಕುಡಿದಳಿರನು ಗುರ ಮೊನೆಯೊಳ್ ಪಿಡಿದುದು ನತಚಂಚು ನೀಡಿ ಗಳಕಂದಳವಂ ಮಡಗೆದಱಿ ನವಾಮ್ರದ ಪೂಮಿಡಿಯಂ ಕರ್ದುಕಿದುದು ಪರಭೃತಂ ಪರಭೃತದಿಂ (ಮಲ್ಲಿಪು. ೫-೩೮). [ ನತ + ಚಂಚು₂ ]

**ನತಜನ** (ನಾ). ೧. ನಮಸ್ಕರಿಸಿದ ಜನ : ನತಜನಕಭಿಮತವೀವಪ್ರತಿಮ ನೆನಿಪ್ಪಭವಸುತನೆ ಚಿತ್ತೈಸು (ತ್ರಿಪುವಿ. ೫೨-೪೬) ; ನತಜನವರದಂ ಶ್ರುತಿನುತಶುಭಗಂ . . . ರತಿಪತಿಹರಣಂ ಜಿತಭವಮರಣಂ ಕ್ಷಿತಿವರನಿದಿರೊಳ್ ನಿಂದಂ (ಹರಿಶ್ಚಂದ್ರ. ೨-೧೦). ೨. ಶರಣಾದವನು : ನತಜನಾಶ್ರಯಧೇನು ಭಕ್ತವತ್ಸಲ ಕೃಪಾಕರ ಮಹಾಭಯನಿವಾರಣ ನೃಸಿಂಹ ತ್ರಾಹಿಯೆನುತಿರ್ದನಾ ಸುಧನ್ವಂ ಮಱೆಯದೆ (ಜೈಮಿಭಾ. ೧೧-೩೭). [ ನತ + ಜನ ]

**ನತದೃಷ್ಟ** (ನಾ). ಅದೃಷ್ಟಹೀನವ್ಯಕ್ತಿ; ದುರ್ದೈವಿ; ದುರದೃಷ್ಟಶಾಲಿ: ಒಟ್ಟಿನಲ್ಲಿ ನಾವು ಮೂವರು ಅವರ ಕುಟುಂಬದಲ್ಲಿಯ ಮೂರು ನತದೃಷ್ಟ ವ್ಯಕ್ತಿಗಳೆಂದು ಪರಿಗಣಿಸಲ್ಪಟ್ಟೆವು (ಸ್ಮೃತಿಚಿ. ೩೩); ನನ್ನಂತಹ ನತದೃಷ್ಟಳನ್ನು ಬಿಟ್ಟು ಅವರು ಬೇರೆ ಯಾರನ್ನಾದರೂ ಪ್ರೀತಿಸಿದ್ದರೆ ಎಷ್ಟು ಸುಖವಾಗಿರುತ್ತಿದ್ದರು ! (ದೂರಸ. ೨೯೦) ; ನೀನು ಎಂದೂ ನತದೃಷ್ಟರ ಕೈಹಿಡಿಯುವುದಿಲ್ಲ (ವಚಭಾ. ೭೭) ; ನಾನು ನತದೃಷ್ಟ (ದೀಪದ. ೧೫೩).

[ <ಸಂ. ನತಾದೃಷ್ಟ (ನತ + ಅದೃಷ್ಟ) ]

**ನತದೃಷ್ಟೆ** (ನಾ). ಭಾಗ್ಯಹೀನಳಾದವಳು ; ದುರ್ದೈವಿ : ಆಕೆ ನತದೃಷ್ಟೆಯಾದ್ದರಿಂದಲೇ ಎಲ್ಲವನ್ನೂ ಕಳೆದುಕೊಂಡಳು (ರೂಢಿ).

[ ನತದೃಷ್ಟ + –ಎ₂ ]

**ನತದೇಹ** (ನಾ). ಬಾಗಿರುವ ದೇಹ ; ಬಗ್ಗಿರುವ ಶರೀರ : ನತದೇಹವಂ ಸೀಳಿ ಭಿನ್ನಭಿನ್ನಂ ಮಾಡಿದೊಡೆಯಾತ್ಮರೂಪಿರ್ಪುದೇ (ವೀಕ್ಷ್ಮಪು. ೪-೭-೩).

[ ನತ + ದೇಹ ]

**ನತನಾಸಿಕ** (ನಾ). ತಗ್ಗಾದ ಮೂಗುಳ್ಳವನು ; ಚಪ್ಪಟೆಯಾದ ನಾಸಿಕವುಳ್ಳವನು ; ನಡ್ಡಿಮೂಗುಳ್ಳವನು : "ಅವಟೀಟಃ, ಅವನಾಟಃ, ಅವಭ್ರಟಃ, ನತನಾಸಿಕಃ–ಇ ಕುಳಿಮೂಗಿನವನ ಹೆಸರುಗಳು, ಚಿಕ್ಕಮೂಗುಳ್ಳವನು, ನಡ್ಡಿಮೂಗುಳ್ಳವನು" (ಸಿದ್ಧಾಂತಿ. ೧೫೭). [ ನತ + ನಾಸಿಕ ]

**ನತಬಂಧು** (ನಾ). ಶರಣು ಬಂದವರಿಗೆ ನಂಟನಾಗಿರುವವನು : ಬಂಧುರದ ವಿದ್ಯೆಯನು ಕಲಿಸಿ ಮದಾಂಧನ ಕೊಲಿಸಿದನಲಾ ನತಬಂಧುವನು ನಾವಗಲಿದುಳಿವೆವದೆಂತು (ನಿಭಾಗ. ೧-೧೧-೫೨).

[ ನತ + ಬಂಧು ]

**ನತಭುವನತ್ರಯ** (ನಾ). ಮೂರುಲೋಕದವರಿಂದಲೂ ನಮಸ್ಕರಿಸಲ್ಪಡುವವನು,–ವಂದಿಸಲ್ಪಡುವವನು ; ತ್ರಿಲೋಕಪೂಜ್ಯ : ನತಭುವನತ್ರಯನೀಶ್ವರಸುತನವಿರಳದಾನನಧಿಕಸಿದ್ಧಿನಿಧಾನಂ ಧೃತಪರಶುಗಣಪನಸ್ಮತ್ಕೃತಿಯಂ ಕೆಯ್ಕೊಂಡು ಮಾಟ್ಕೆ ನಿರ್ವಿಘ್ನತೆಯಂ (ಲೋಕೋಪ. ಪೀಠಿಕೆ ೨). [ ನತ + ಭುವನತ್ರಯ ]

**ನತಮುಖಿ** (ನಾ). ಮುಖವನ್ನು ಬಾಗಿಸಿದವಳು ; ತಲೆಯನ್ನು ತಗ್ಗಿಸಿದವಳು : ನನ್ನ ದೃಷ್ಟಿ ಮತ್ತು ಅವಳ ದೃಷ್ಟಿಗಳು ಒಂದು ಕ್ಷಣ ತಾಕಲಾಡಿದವು. ಅವಳು ಪುನಃ ನತಮುಖಿಯಾದಳು (ಹೇಮಂತ. ೧೯೪).

[ ಸಂ. ನತಮುಖೀ (ನತ+ಮುಖಿ+–) ]

**ನತರಕ್ಷಾಚತುರ** (ನಾ). ನಮಸ್ಕರಿಸಿದವರನ್ನು ಕಾಪಾಡುವುದರಲ್ಲಿ ಜಾಣನಾದವನು ; ಶರಣು ಬಂದವರನ್ನು ರಕ್ಷಿಸುವುದರಲ್ಲಿ ಕುಶಲನಾದವನು : ಶ್ರೀಚಂಡಿಕಾಮುಖೇಂದುವಿಲೋಚನನರುಚಿಚಂದ್ರಿಕಾಚಕೋರಂ ನತರಕ್ಷಾಚತುರಂ ಭವಪಾಶವಿಮೋಚಕನೆಮಗೀಗೆ ಸೌಖ್ಯಮಂ ಶಿವಲಿಂಗಂ (ರಾಜಶೇ. ೧೧-೧). [ ಸಂ. ]

**ನತವಾಣಿ** (ನಾ). ಸರಸ್ವತಿಯಿಂದ ನಮಸ್ಕೃತಳಾದವಳು; ವಾಣಿಯಿಂದ ಪೂಜ್ಯಳಾದವಳು : ನತವಾಣಿ ಕನಕಾಚಲಶ್ರೋಣಿ ಕಾಳಾಹಿವೇಣಿ (ಕನಾಕಳ. ೨೨೪). [ ನತ + ವಾಣಿ₁ ]

**ನತಾಸ್ಯ** (ನಾ). ಮುಖವನ್ನು ಬಾಗಿಸಿದವನು ; ತಲೆಯನ್ನು ತಗ್ಗಿಸಿದವನು : ನಯದಿಂದೆಲ್ದು ನತಾಸ್ಯನಾಗಿ . . . ದಿಟ್ಟವಾರಿಯ ಧೀರಂ ವೃಷಭೇಂದ್ರನಪ್ರತಿಮಕಾಯಂ ಮುಂದೆ ನಿಂದಿರ್ಪುದುಂ (ಗಿರಿಜ. ೧೧-೭೮).

[ ನತ + ಆಸ್ಯ ]

**ನತಿ** (ನಾ). ೧. ಬಾಗಿರುವಿಕೆ ; ವಕ್ರವಾಗಿರುವಿಕೆ. ೨. ನಮಸ್ಕಾರ ; ವಂದನೆ : ಜಿನಚರಣದೊಳಿರೆ ನತಿ ಮತಿ ಜಿನಗುಣಸಂಪತ್ತಿಯೊಳ್ ಪೊದಟ್ಟಿರೆ (ಶಾಂತಿಪು. ೭-೮೦) ; ನಿರ್ಮಳವೌಕ್ತಿಕಾಕ್ಷತೋತ್ಕರಮನುಪೇಂದ್ರಪಾದದುಷ್ಪಭೂಮಿಗೆ ಸೂಸಿದನುತ್ಸಹಂ ಪೊದಟ್ಟಿರೆ ವನಪಾಳಕಂ ನತಿಚಳಾಳಕ[ಪಾಠಾಂ. ವಿನತಜಾಲಕ]ನುದ್ಗತರೋಮಜಾಳಕಂ (ಜಗವಿ. ೧೪-೯೩) ; ನತಿ ನುತಿಪೂಜೆಗಳಂ ಸನ್ಮತಿ ಜಿನಪತಿಗಿಂತು ಭಕ್ತಿಯಿಂ ಮೊದಲೊಳ್ ಗೋಪತಿ ಮಾಡಿ ನೋಡಿದಂ ದಶಶತನಯನದೆ ಸಮವಸೃತಿಯ ಶೋಭೋನ್ನತಿಯಂ (ವರ್ಧಪು. ೧೫-೮೭) ; ನತಿಯಂ ನುತಿಯಂ ಸತ್ಸಂಗತಿಯಂ ಸಂಸ್ಕೃತಿಯನತಿಶಯಾಸ್ಪದ ಪೂಜಾತತಿಯಂ ಜಿನೇಂದ್ರಪದದೊಳ್ ಮತಿವಂತಂ ಮಾಟ್ಪುದರ್ಥಿಯಿಂ ಸ್ವಾರ್ಥಪರಂ (ಉಸಾರ. ೫೦) ; ಶ್ರೀಗುರುವಿಗಾಗಿ ತನುಧಾರಿಯಾಗಿ ಬಂದಂಥ ಸದಾಶಿವಗೆ ಅನಂತಾನಂತ

ನತಿಯ ಉಪಕೃತಿಯ ಒಪ್ಪಿಸುವವು ಇವಗೆ (ಅರಳು. ೨೪೩-೨). ೩. "(ನಕ್ಷತ್ರ. ಮೊ. ಗಳ) ಕ್ಷಿತಿಜದ ಕೆಳಗಿನ ಕೋನದೂರ: ನತಿ; ಅವನತಿ . . ನತಕೋನ" (Depression. ಇಂಕನಿ). [ಸಂ.]

**ನತಿಗೆಯ್, ನತಿಗೈ** (ಕ್ರಿ). ನಮಸ್ಕರಿಸು; ಪೊಡಮಡು; ಕೈಮುಗಿ: ಭಯಭಕ್ತಿಯಿಂದಡಿಗಳ್ಗೆ ಲೀಲೆಯಿಂ ದಂಡವನ್ನತಿಗೆಯ್ದು ಮುಗುಳ್ದೆಳ್ದು ನಿಂದು ಕರಯುಗವ ಮುಗಿದು (ಕುಮಾವ್ಯಾ. ೨-೫೦). ನತಿಗೈ: ಪ್ರತಿಮೆಯ ರೂಪದ ಪಂಕಜನಾಭಗೆ ನತಿಗೈದು ನಲವೇರುವಂತೆ ಪತಿಯ ರೂಪದೆ ತನ್ನ ಪಾಲಿಗೆ ಬಂದ ಶ್ರೀಪತಿಯ ಪಾದವ ಭಜಿಸುವುದು (ಹದಿಬ. ೩-೭). [ನತಿ + ಕೆಯ್$_1$]

**ನತಿಗೈ** 'ನತಿಗೆಯ್' ನೋ.

**ನತೆ** (ನಾ). ನಮಸ್ಕಾರ ಮಾಡಿದವಳು: ನತೆಯಾಗಿ ತತ್ಪಪಶ್ರುತ ಯುತೆಯರ ಪಕ್ಕದೊಳೆ ಪರಮುನಿಪೆ ಯನರ್ಹನ್ಮತಕಥಿತಸಿಂಹ ನಿಃಕ್ರೀಡಿತಾ ದಿನೋಂಪಿಗಳನಾಂತೂ ನೋನುತ್ತುಮಿರಲ್ (ಮುಹಾನೇ. ೧೭-೧೩). [ಸಂ. ನತಾ]

**ನತೋನ್ನತ** (ಗು). ಏರು ತಗ್ಗುಗಳುಳ್ಳ; ಹಳ್ಳತಿಟ್ಟುಗಳಿಂದ ಕೂಡಿದ: ಇಳಿದೇರಿ ಮರ ಪೊದೆಯ ಚೆಲ್ವಿನ ನತೋನ್ನತವನಾದ್ರಿಸೀಮೆಯನಾ ವಿಭೀಷಣಂ ಮರೆಯಾಗೆ (ಶ್ರೀರಾಮಾ. ೮೧೭-೧೮೩). 'ನಿಮ್ನೋನ್ನತ' ಪರಾ. [ನತ + ಉನ್ನತ]

**ನತ್ಕುಟಕ** (ನಾ). [ಛಂದ] ಪ್ರತಿಯೊಂದು ಚರಣದಲ್ಲಿಯೂ ಹದಿನೇಳು ಅಕ್ಷರಗಳಿರುವ ಒಂದು ಸಮವೃತ್ತದ ಹೆಸರು; ಸುಮಂಗಲಿ: ನಜಭಜಜಲಗಂ ಬರೆ ಸುಮಂಗಲಿಯೆಂಬರದಂ ಇದಕ್ಕೆ ನತ್ಕುಟಕ ಎಂದು ಮತ್ತೊಂದು ಹೆಸರು (ಛ್ಲಂಬು. ೮೫). 'ನರ್ಕುಟಕ' ಪರಾ. [?]

**ನತ್ತ** (ನಾ). (?) : ಪೂರು ನತ್ತದ ಸುತ್ತಲೂ ಮತ್ತು ಇತರ ಕಿಷ್ಕಿಂಧವಾದ ಕುರುಮುಂದೆ ಹಿತ್ತಲುಗಳು ಮುಂತಾದ ಸ್ಥಳದಲ್ಲಿ ಬಾಂದುಗಳಿಗೆ ಬದಲು ಕಲ್ಲುಗಳನ್ನು ಹೂಳಬಹುದು (ಭೂಮಿಅ. ೨೪). [?]

**ನತ್ತಿ** 'ನತ್ತು$_2$' ನೋ.

**ನತ್ತು$_1$** (ಕ್ರಿ). (ಸ್ವಾಭಾವಿಕವಾಗಿ ಅಥವಾ ಉದ್ರೇಕದಿಂದ) ಬಿಕ್ಕುತ್ತ ಮಾತನಾಡು; ಉಗ್ಗು; ತೊದಲು.

**ನತ್ತಿ ಮಾತಾಡು** = "(ಸ್ವಾಭಾವಿಕವಾಗಿ ಅಥವಾ ಉದ್ರೇಕದಿಂದ) ಬಿಕ್ಕುತ್ತ, ಉಗ್ಗುತ್ತ, ನತ್ತಿ,-ಮಾತಾಡು, ಹೇಳು" (Stammer. ಇಂಕನಿ); ನತ್ತಿ ಮಾತಾಡುವವನ ಮಾತು ಸುತ್ತಿ ತೊಳಲಿದರೆ ಪಟ್ಟು ಆದೀತೇ? (ಗಾದೆ). [ದೇ. ॥ ಮಲ. ತೆಲು. ನತ್ತು]

**ನತ್ತು$_2$, ನತ್ತಿ** (ನಾ). ಉಗ್ಗುವಿಕೆ; ಬಿಕ್ಕುತ್ತ ಮಾತನಾಡುವಿಕೆ; ಬಿಕ್ಕಲು: "ಉಗ್ಗು, ಬಿಕ್ಕಲು, ನತ್ತು" (Stammer. ಇಂಕನಿ). ನತ್ತಿ: "ಉಗ್ಗು, ಬಿಕ್ಕಲು, ತೊದಲು, ನತ್ತಿ" (Impediment in one's speech. ಇಂಕನಿ); ಶಾಸ್ತ್ರಿಗಳ . . . ನಾಲಿಗೆಯಲ್ಲಿ ನತ್ತಿ ಇಲ್ಲದೆ ಇದ್ದಿದ್ದರೂ ಬಹುಶಃ ಅವರು ಅದೇ ಶಿಕ್ಷಣಕ್ರಮವನ್ನು ಅನುಸರಿಸುತ್ತಿದ್ದರೆಂದು ತೋರುತ್ತದೆ (ಜ್ಞಾ. ಪಕ. ೧೩೮); ಪಾರಾಯಣಕಾಲದಲ್ಲಿ ಅವರನ್ನು ನೋಡಿ ದವರು ಅವರಿಗೆ ನತ್ತಿ ಇತ್ತೆಂಬುದನ್ನು ನಂಬುತ್ತಿರಲಿಲ್ಲ (ಜ್ಞಾ. ಪಕ. ೧೪೨). [<ನತ್ತು$_1$./ತೆಲು. ನತ್ತಿ]

**ನತ್ತು$_3$** (ನಾ). ಮೂಗಿನಲ್ಲಿ ಧರಿಸುವ ಆಭರಣ: ಹರಳೋಲೆ ಹೊನ್ನ ಪೂ ಮಾಣಿಕದ ಪೊಸನತ್ತು ಮೋಹನದ ಮಾಲೆ ಬಹುಭೂಷಣಂಗಳ ನಿಡುತ್ತ (ಚಕುಪು. ೧-೭-೯); ರಜಪೂತ ಹೆಂಗಸಿನ ಮುಖ್ಯ ಕುರುಹು ಆಕೆಯ ನತ್ತು (ಕಭಾಗ. ೦೦೪); ಮುತ್ತೈದೆರೆಲ್ಲರೂ ನತ್ತಿಟ್ಟು ನಲಿಯುತ ಮುತ್ತಿನಾರುತಿ ಬೆಳಗುತ ಹಾಡಿದರು (ಸಿದ್ಧಪು. ೧-೬೮); ಮನವು ಮುತ್ತಾಗಿಹುದು ನತ್ತಾಗಿ ಧರಿಸಿಕೋ ಸಿಖುವ ತೆರೆಯುವ ಮುನ್ನ (ಕಲ್ಯಾ೧೮. ೯-೭); ಮೊಗಕ್ಕೊಪ್ಪುವ ಮಾಟಾದ ಮೂಗಿನಲ್ಲಿ ಅಂದವಾದ ನತ್ತು (ಕರಿಹಾ. ೧); ನತ್ತಿಗೆ ಯೋಗ್ಯಳಾದವಳು ಮುತ್ತು ಬಯಸಿದ ಹಾಗೆ (ಗಾದೆ).

**ನತ್ತಿನೋರು** = ಸೂಳೆಯರು; ವೇಶ್ಯೆಯರು; P ಕೆಲವು ಪ್ರದೇಶಗಳಲ್ಲಿ ವೇಶ್ಯಾವೃತ್ತಿಯ ಜನ ಪುರುಷನನ್ನು ತನ್ನವನನ್ನಾಗಿ ಒಪ್ಪಿಕೊಳ್ಳುವುದಕ್ಕೆ ಮುಂಚೆ ಅವನಿಂದ ಒಂದು ಮೂಗಿನ ಬಟ್ಟು ಎಂಬ ಒಡವೆಯನ್ನೋ ಅಥವಾ ಒಂದು ಸೀರೆಯನ್ನೋ ಪಡೆದು ಹಿಂದಿನಿಂದ ಬಂದ ಸಂಪ್ರದಾಯವನ್ನು ಅನುಸರಿಸುವ ಕ್ರಮವಿದೆ: ಈ ಊರಿನ 'ನತ್ತಿನೋರೆಲ್ಲಾ' ಅವನ ಮನೆಯವರೇ. 'ನತ್ತಿನೋರು ಅಂದರೆ' . . . ಸೂಳೇರು (ಗುಲಾಬಿ. ೦೯). [←ಅರ. ನತ್ಥ್; ಹಿಂ. ನತ್ಥ್, ನಥ್, ನಾಥ್; ಮರಾ. ನಥ್./ಪ್ರಾ. ಣತ್ಥಾ]

**ನತ್ತು$_4$** (ನಾ). ೧. ಹೇನಿನ ಸಣ್ಣ ಮರಿ; ಸಣ್ಣಹೇನು: ಸೀರು ಸಿರವನು ತಿಂತು ನತ್ತು ನರವನು ತಿಂತು ಚಿಂತೆಯು ಜನುಮುವ ತಿಂತು (ಇಂಜಾಪ. ೧೭೦-೪೪); ಅವಳ ತಲೆಯಲ್ಲಿ ತುಂಬ ನತ್ತು, ಹೇನುಗಳಿವೆ (ರೂಢಿ). ೨. ಕೀಟ; ಹುಳು. [ದೇ. ॥ ತಮಿ. ನತ್ತು, ನತ್ತೈ = ಶಂಖದ ಹುಳು; ಮಲ. ನನ್ನಿ; ತೆಲು. ನತ್ತ = ಶಂಖದ ಹುಳು]

**ನತ್ವ** (ನಾ). ನ ಎಂಬ ಅಕ್ಷರ: ಪರದೊಳ್ ಸ್ವರಮಿರೆ ಬಿಂದುಗೆ ದೊರೆಕೊಳ್ಗುಂ ನತ್ವಮತ್ವಂ (ಶಮದ. ೧೦೪). [ಸಂ.]

**ನದ** (ನಾ). ೧. ಶಬ್ದ ಮಾಡುವಿಕೆ; ಗದ್ದಲ ಮಾಡುವಿಕೆ; ಸಪ್ಪಳ; ಶಬ್ದ. ೨. (ಶಬ್ದದೊಂದಿಗೆ ರಭಸವಾಗಿ ಹರಿಯುವ) ದೊಡ್ಡ ನದಿ; ಗಂಡುತೊರೆ; ಗಂಡುನದಿ; P ಪ್ರಸಿದ್ಧ ಸಂಸ್ಕೃತ ಟೀಕಾಕಾರ ಮಲ್ಲಿನಾಥನ ಅಭಿಪ್ರಾಯದಂತೆ ಪಶ್ಚಿಮಕ್ಕೆ ಹರಿಯುವ ನದಿ: "ಭಿದ್ಯಃ, ಉದ್ಯಃ, ನದಃ – ಈ ೩ ಗಂಡುದೊಱೆ" (ಹಲಾಯು. ೦೦೦-೪೪); "ನದಮುದ್ಯಮೆನೆ ಭಿದ್ಯಮೆನೆ ಗಂಡುದೊಱೆಯುದು" (ಮಂಗರಾ. ೦೨೨-೧೦); ಪುಣ್ಯನದೀನದನಗ[ಲಾ]ವಣ್ಯವಿಭೂಷಣೆಯನೊಲ್ದು ನೋಡುತ್ತುಮಿಳಾಪುಣ್ಯಸ್ತ್ರೀಯಂ ಸಂಚಿತಪುಣ್ಯರ್ ಪಾಂಚಾಲದೇಶಮಂ ಪುಗುತಂದರ್ (ಪಂಪಭಾ. ೩-೭೭); ಪೋಱಮಟ್ಟಿಭಂ ಬನದದಿಂ ನದದಿಂ ನದದಿಂದ್ರುಮವಜ್ರನಿಷ್ಠುರವೆಱಗಿತ್ತಿಭಾಪಥನವಂ ಘನವಂ ಘನವಂಶಜಾಲವಂ (ಜಗವಿ. ೧೭-೯); ಮದವದಿಭೇಂದ್ರದಾನಸಲಿಲಂ ನದರೂಪಮನೆಯ್ದೆ . . . ರಾಗದೆಯ್ದಿದನಿರದಾ ಸುಧರ್ಮಮುನಿಪೋತ್ತಮನಾಶ್ರಮಮಂ ನೃಪೋತ್ತಮಂ (ಕುಸುಮಾ. ೪-೯೪); ಅಲ್ಲಿಗಲ್ಲಿಗೆ ಗವಾಸ್ಪದಗಳಿಂ ನದಗಳಿಂದಾ ದೇಶಮೊಪ್ಪಿರ್ದುದು (ಚಂಪು. ೦೦-೪). ೩. ಸಮುದ್ರ; ಸಾಗರ. ೪. ಮೋಡ; ಮೇಘ.

**ನದನದಿ** = ಗಂಡು ಮತ್ತು ಹೆಣ್ಣು ಹೊಳೆಗಳು: ನದ[ನ]ದ್ಯುದ್ಭೂತವಾರಿಪ್ರಸರಮೆಸ[ರೆ] ನೀರಂದದಿಂ ಕಾಯ್ದುದಾಕಾಶದಿಶಾಳಂ . . . ಎಂಬ ವೈಶಾಖದೊಳಾ ಯೋಗೀಶ್ವರರು ಕಲ್ಮೆಲೆ ನೆಲಸಿ ಹಿಮಾದ್ರೀಂದ್ರ ಮಿರ್ಪಂತಿರಿರ್ದ (ಸುಕುಮಾ. ೪-೧೩); ನದನದೀಕುಳದೊಳ್ ಪರಿವರ್ಧಿಕುಂ ಜಗಜ್ಜೀವನಜೀವನಂ ಮುಱಿಗಳಿಂ ಮುಱಿಯುಂ ಕಱಿವಂ ಹಿತಾರ್ಥಮಿಮಾ ಭೂಮಿವಳಯಕ್ಕೆ ಶಕ್ರನದು ಕಾರಣಮರ್ಚಿಪುದಿಂದ್ರಮಂ ಜನಂ (ಜಗವಿ. ೪-೭೭); ನದನದ್ಯಾಘಾಂಬುಮಂ ಪೀರ್ದೆಳೆ ನೆಱೆಯದೆ ಬಾಯ್ವಿಟ್ಟ ಪೊಲ್ ಬೀಡೆಗಳ್ ಪರ್ವಿದುವು (ಚಂದ್ರಪು. ೯-೬೬). [ಸಂ.]

**ನದನಿಕಟ** (ನಾ). ಹೊಳೆಯ ತೀರದ ಪ್ರದೇಶ: ವಿದಲಿತ ನಲಿನೀಸುಖದಂ ನದನಿಕಟಂ ವಿವಿಧವರ್ಣಮಣಿಗಣಶೋಭಾಸದನಂ ಪರ್ವತನಿಕಟಂ ಮದಗಜಮದಸಲಿಲಸದನಮಟವೀನಿಕಟಂ (ಮಲ್ಲಿಪು. ೨-೦೦). [ನದ + ನಿಕಟ]

**ನದರಿಡು, ನೆದರಿಡು, ನೆದರಿಡು** (ಕ್ರಿ). ೧. ಲಕ್ಷಿಸು; ಗಮನವಿಡು

ರಾತ್ರೆವುದಯ ಸಾಯಂಕಾಲ ನದರಿಟ್ಟು ಹಸು ನಿದ್ರೆದೊಳದು ಪದವಿರ್ದ ಲಿಂಗ ಪೂಜಿಸುವಾರುಯನ್ನಂತ ಮುದಿವೂರ್ಶಿಗಾರು ಮನ್ನಿಪರು (ದೀದಕಾ. ೪-೧೫) ; ನದವಲಜ್ಞಾನದ ಕುದಿ ಉಕ್ಕಿ ಬರುವಾಗ ನದರಿಟ್ಟು ನಿನ್ನೊಳು ಸದಘಲ ತತ್ವವಿ ತಿಳಕೋ ಬರಕೋ (ಶರೀಫ. ೭೭ ಕವಿಕಾವ್ಯ ಪರಿಚಯ). **ನೆಜರಿಡು** : ೧. ಒಂದೀಟು ನೆಜರಿಟ್ಟು ನಡಿ. ನಮ್ಮ ಬಿಚ್ಚು ನಷಘಪ್ಪ . . . ಕೂದಲೆಳೀಲೆ ಉರುಲು ಹಾಕಾಂವ (ಪತಿತೋ. ೭೭).

**ನೆದರಿಡು** : ೧. ಸದ್ಯ ನೆದರಿಟ್ಟು ನೋಡಿಕೋ ಉದಿಸಿದ್ಯಾವಲ್ಲೆ (ಶರೀಫ. ೩೫-೧೦). ೨. ಬಯಸು ; ಕಾಮಿಸು ; ಅಪೇಕ್ಷೆಪಡು : ಮಾವೀನ ಹಣ್ಣು ಮನಿಯಾಗ ಇಟಗೊಂಡು ನೀರಲಕ್ಯಾಕ ನೆದರಿಟ್ಟ (ಗರತಿ. ೧೨೮).

[ ನದರು (<ನಜರು) + ಇಡು$_1$ ]

**ನದರಿಸು** 'ನಜ್ರಿಸು' ನೋ.

**ನದರು** 'ನಜರಂ' ನೋ.

**ನದರುಕಾಣಿಕೆ** 'ನಜರುಗಾಣಿಕೆ' ನೋ.

**ನದರುಗಾಣಿಕೆ** 'ನಜರುಂಗಾಣಿಕೆ' ನೋ.

**ನದರುಗೆಡು** (ಕ್ರಿ). ಕಂಗೆಡು ; ದಿಗ್ಭ್ರಮೆಗೊಳ್ಳು : ಮದನಗಂಜುತ ಮಾಂದಳಿರಿಗೆದೆಬೆದರುತಳಿವಿಂಡುಗಳ ರಭಸಕೆ ನದರುಗೆಡುತ . . . ಚಂಡ ರಕ್ಕಸ ಬೆದರುತ್ತೈದಿದ ಬನದೊಳಗಜೆಯ ಕಾಬ ತವಕದಲಿ (ಅಂಬಿಕಾ. ೧೮-೮). [ ನದರು (<ನಜರು) + ಕೆಡು$_1$ ]

**ನದಿ** (ನಾ). ಹೊಳೆ ; ತೊರೆ ; F ಎಂಟು ಸಾವಿರ ಧನುಃಪ್ರಮಾಣಕ್ಕೆ ಕಡಮೆಯಿಲ್ಲದಷ್ಟು ದೀರ್ಘವಾಗಿಯೂ ಅಗಲವಾಗಿಯೂ ಹರಿಯುವ ಜಲಪ್ರವಾಹಕ್ಕೆ 'ನದಿ' ಎಂದು ಟೀಕಾಕಾರರು ಸೂಚಿಸುತ್ತಾರೆ : "ಸಿಂಧವಃ ಸ್ರವಂತೀ, ತಟನೀ, ತರಂಗಿಣೀ, ನದೀ, ಧುನೀ . . . ರೋಧೋವಕ್ರಾ – ಈ ೨೧ ತೊಱೆ" (ಹಲಾಯು. ೦೦೦-೯೩) ; "ನದಿ ತರಂಗಿಣಿ ತಟನಿ ಧುನಿ ಸಿಂಧು . . . ದ್ವೀಪವತಿಯಾಪಗೆಯೆನೆ ತೊಱೆಗೆ ನಾಮಂ" (ಚುಂಗರಾ. ೬೩೨-೧೦) ; ಜಂಬೂದ್ವೀಪದ ಮೇರುವಿನ ಮೂಡಣ ವಿದೇಹದ ಸೀತಾನದಿಯ ಬಡಗಣ ತಡಿಯೊಳ್ (ಆದಿಪು ೩-೭೮) ; ಹರಿವ ನದಿಗೆ ಮೈಯೆಲ್ಲ ಕಾಲು ಉರಿವ ಕಿಚ್ಚಿಗೆ ಮೈಯೆಲ್ಲ ಬಾಯಿ (ಅಪಜಂ. ೧೭೨-೭೭೫) ; ನದಿಯಂ ನಾವಿಕನಂತೆ ಪೊಕ್ಕು ಗುಱಿಯಂ ಧಾನುಷ್ಕನೆಂಬಂತೆ ತಪ್ಪದಿದಂ ಕಂಬಮನೆಚ್ಚುದು (ಪಾರ್ಶ್ವಪು. ೧೦-೧೨೦) ; ನದಿ ಕಣ್ದೆಱೆದಂತೆ ಪೊಳಂಕಿದ ಮಾನಂ ಮೊಸಳೆ ಪಾಯ್ದು ನರಪತಿಯ ವಿನೋದದ ಗುಜ್ಜುಸಿಕ್ಕೆ ಪಿಡಿದತ್ತದನಧಿಪತಿ ಜಾಲಗಾಱರಿಂ ತೆಗೆಯಿಸಿದಂ (ಯಶೋಚ. ೩-೯೮) ; ಮಱುದಿವಸ ವೇದಾವತಿಯ ಸಾರ್ದರು ಬಳಿಕ್ಕವರಲ್ಲಿ ರಜನಿಯ ಪರಿಹರಿಸಿ ದಾಂಟಿದರು ನದಿಯನು ಮೂಱನೆಯ ದಿವಸ (ತೊರರಾ. ೨-೪-೯) ; ನದೀ ದಾಟ್ ಬದೀಲಿ ಬಿದ್ದ ಹಾಗೆ (ಗಾದೆ).

ನದಿನದ, ನದೀನದ = ಹೆಣ್ಣು ಮತ್ತು ಗಂಡು ಹೊಳೆಗಳಂ : ಮೂಱೆಡದ ಗಾಳಂಗಳಿಂ . . . ಸೊಗಡುಗಳೊಳುಗಳ ಮದ್ದುಗಳ ಮಸಕದಿಂದಂ ನದಿನದಾಳಿಯೊಳು ಘಿನ್ನಗಳಂ ತವಿಸುತಿಹ ಬೇಡರಂ ನೋಡಿದಂ ಭೂನಾಥನು (ಹಚಳಾ. ೫-೪೪) ; ಅಂತವರಿರ್ವರುಂ ನಾನಾನದೀನದಾಂತರಾಳಸಂಪನ್ನನಪದಂಗಳಂ ಕಳಿದು ಕತಿಪಯಪ್ರಯಾಣಂಗಳಿಂ . . . ಬಂದು (ಸುಕುಮಾ. ೨-೯೫೮) ; ನದೀನದೌಘಮಾಗಳೆ ಬಱುಗಂಪಲಾಯ್ತು ಕುಱಿಯುಂ ತೆವರುಂ ಸಮನಾದ್ಪುದೆತ್ತಲುಂ (ಪುಷ್ಪಪು. ೫-೯೭) ; ಕಾವಿಮಿತಾರ್ಥವನೀವವಂದಿನ ಭೂಮಿ ಬಿತ್ತದೆ ಜನಿಪ ವಸ್ತುಸ್ತೋಮವನು ತಂದೀವುದದ್ರಿನದೀನದಾದಿಗಳು (ನಿಘಾಗ. ೦-೭-೪) ; ಅಕ್ಷಯವಾದ ಸರೋವರವೊಂದರಿಂದ ಅನೇಕ ದಿಕ್ಕುಗಳಲ್ಲಿ ಸಹಸ್ರಾಧಿಕ ನದೀನದಗಳು ಹೊರಹೊರಟು ಬರುವಂತೆ (ತತ್ವಪ್ರಾ. ೬೨೯). **ನದಿಯ ಮಗ** = (ಗಂಗಾ) ನದಿಯ ಸುತ ; ಗಾಂಗೇಯ ; ಭೀಷ್ಮ : "ನಾದೇಯಃ, ನದೀಸುತಃ– ಈ ೨ ನದಿಯ ಮಗಂ" (ಹಲಾಯು. ೮೨-೩೪೭) ; ಇದು ಮಹಾಮಖವಿಲ್ಲಿ ಪೂಜ್ಯನು ಯದುಗಳರಸನು ಭಟ್ಟನಿಲ್ಲಿಗೆ ನದಿಯ ಮಗನಿಲ್ಲಿಗೆ ಸದಸ್ಯರು ನಾರದಾದಿಗಳು (ಕುಮ್ಯಾಸ. ೧೦-೩೯) ; ನದಿಯ ಮಗ ಗುರು ಗುರುತನೂಜನು ವಿದುರಭಾರದ್ವಾಜಮುಖ್ಯರು . . . ಬಹಳಾಭ್ಯುದಿತಬಲ ನೆರೆದೆದ್ದು ನಡೆದುದು ಭರದ ಪಯಣದಲಿ (ಕುವ್ಯಾಅ. ೭೪೩. ೨೫-೭). **ನದಿ ಹಾಯು** = ಹೊಳೆಯನ್ನು ದಾಟು,–ಕ್ರಮಿಸು : ನದಿ ಹಾಯೋನಿಗೆ ತಿದಿ ಯಾಕೆ ? (ದುರಂನಾ. ೯೪). [ ಸಂ. ನದೀ ]

**ನದಿಗವುಂಡ** (ನಾ). ಒಬ್ಬಾತನ ಹೆಸರು : ಸದೆಯನೂರ ನದಿಗವುಣ್ಡನು ತಿಬರ್ೞರ ಮಾರಗವುಣ್ಡ (ಮ್ಯಆರಿ. ೧೯೧೯, ೧೦-೭೩ ; ೪೦೦).

[ ನದಿ + ಗವುಂಡ (<ಗಾವುಂಡ) ]

**ನದಿಜ** (ನಾ). = ನದೀಜ ೩. : ಇದಿರುಗೊಂಡರು ಹಿರಿದು ಮನ್ನಿಸಿ ವಿದುರನನು ಕೊಂಡಾಡಿ ಗುರು ನೃಪ ನದಿಜ ಧೃತರಾಷ್ಟ್ರಾದಿಗಳ ಸುಕ್ಷೇಮ ಕುಶಲಗಳ ವಿದುರನಾಗಮನಪ್ರಪಂಚದ ಹದನನೆಲ್ಲವ ಕೇಳಿದರು (ಕುವ್ಯಾಅ. ೦-೦೮).

[ <ಸಂ. ನದೀಜ ]

**ನದಿಪು** (ಕ್ರಿ). (ಬೆಂಕಿ, ದೀಪ, ಉರಿ, ಬೆಳಕು, ತಾಪ ಮೊದಲಾದುದನ್ನು) ನಂದಿಸು ; ಆರಿಸು : ಭರತನ ಮೊಗದೊಳ್ ಪರ್ವಿದ ಖರ ಕೋಪಾನಲನನೆಯ್ದೆ ನದಿಪುವವೊಲ್ [ಪಾಠಾಂ. ನಂದಿಪವೋಲ್] ತನ್ನರಕತ ಮಣಿವರ್ಣಂ ಕರಪರಿಘದಿನೊಡನೊಡನೆ ತುಳ್ಕಿದುದು ತಿಳಿನೀರಂ (ಆದಿಪು. ೦೪-೦೦೫) ; ಬಲದೇವನ ಮನದೊಳಾದ ಮುಳಿಸೆಂಬ ಕಿಚ್ಚಂ ತನ್ನ ಮೃದು ಮಧುರವಚನರಚನಾಜಳಂಗಳಂ ತಳಿದು ನದಿಪಿದಂ (ಪಂಪಭಾ. ೫-೨೨೫) ; ಮದನದಾವಾಗ್ನಿಯಂ ನದಿಪೆ ಮಾಡಿದ ಕಾಮನದಿಯೆನಿಸುವುವು ದಿವಿಜದಂಪತಿಶತದೊದವಿದ ರತದ ಪದನಲ್ಲಿ (ಶಾಂತಿಪು. ೨-೯೩) ; ದವರೌದ್ರಜ್ವಲನಾದ್ಭುತಂ ಹೃದಯದೊಳ್ ಶೋಕಾಗ್ನಿ ಕೈಗಣ್ಮೆ ಪೊಣ್ಮುವ ಕಿಚ್ಚಂ ನದಿಪಲ್ಕೆ ಬರ್ಪ ತೆಱದಿಂದಂ ಕಣ್ಗಳಿಂದುಣ್ಮಿ ಪೊಣ್ಮುವ ನೇತ್ರಾಂಜನವಿಶ್ರಬಾಷ್ಪಜಲಧಾರಾಬಿಂದುಗಳ್ ಕೂಡೆ (ಅಜಿಪು. ೧೦-೯೩) ; ಅಳವಿಗೞಿದ ಉರ್ವ ಮದನಾನಳನಂ ನದಿಪಲ್ಕೆ ಪಲವುಮಮೃತದ ಪನಿಯಂ ತಳಿವಂತೆ ಧುಂತರುಚಿಗಳ್ ತುಳುಂಕೆ ನೃಪಸುತನನಾರ್ಯಸುತನಿಂತೆಂದಂ (ಲೀಲಾವ. ೪-೩೫) ; ಉಂತೆ ಜಗಂಗಳಂ ತಿಗುರಿಗಂ ತರುತಿರ್ಪ ಮನೋಜನೀ ವಸಂತಂ ತಲೆದೋಱುತಿಂ ಹರನ ಕಣ್ಣುರಿಯಂ ನದಿಪಲ್ ಸಮರ್ಥನೋ (ಚಂದ್ರಪು. ೭-೪೭).

ನದನದಿಪು (ದ್ವಿರುಕ್ತಿ) : ನಿಚ್ಚಂ ಪಗಲಿನಕಾಂತದ ಕಿಚ್ಚನಿರುಳ್ ಚಂದ್ರಕಾಂತದೊಱೆಪಂ ಪಡೆದಾ ಕಿಚ್ಚ ನನೆ[ದ]ನದಿಪೆ [ ಪಾಠಾಂ. ನದನದಿಸೆ, ಸದನಡಿಸೆ] ಮಾಡುಗುಮುಚ್ಚರಿಯಂ ಪಗಲುಮಿರುಳುಮಾ ವಿಜಯಾರ್ಧಂ (ಅಜಿಪು. ೯-೨೨). [<ನಂದು ? ]

**ನದಿಮೊಗ** (ನಾ). ಹೊಳೆಯಪಾತ್ರ,–ಪ್ರವಾಹ: ಮೂರು ಖಂಡಗಳೇಳು ಸಾಗರಂಗಳನು ಹದಿಮೂರು ನದಿಮೊಗಗಳನು ದಾಟಿ ಬಂದೆಲ್ಲಿ ಭಾರತೀಯರ ಹೃದಯ ದೈವಸಮ್ರಾಜ ದರಬಾರ ನಡೆಸಿದನೆಲ್ಲಿ–ನೋಡಿದುವೆ ಇಲ್ಲಿ ! (ಕಎಪು. ೫೫). [ ನದಿ + ಮೊಗ ]

**ನದಿಯಮರ** (ನಾ). ಒಂದು ಬಗೆಯ ಮರ : "ಬೃಹತ್ಪತಿಃ, ಬೃಹಸ್ಪತಿಃ ಈಯೆರಡು ನದಿಯಮರ, ನೇಱಿಲ್" (೬ಪಧಿ. ೦೯೧).

[ ನದಿ + ಮರ$_1$ ]

**ನದಿವಾಸಿ** (ನಾ). ಹೊಳೆಯ ಬಳಿ ವಾಸಿಸುವವನು : ನದಿವಾಸಿಗಳು ವನವಾಸಿಗಳು ಗಿರಿವಾಸಿಗಳು ಗುಹ್ಯ ಗುಹೆವಾಸಿಗಳು ಇಂದ್ರಿಯಭಯಂಗಳಿಗೆ ಅಂಜಿ ಕಂದಮೂಲಾದಿಗಳ ಭಕ್ಷಿಸುವ ಕಾನನದ ಮುರುಳುಗಳೆಲ್ಲಾ ಲಿಂಗ ಪ್ರಾಣಿಗಳಿಗೆ ಪ್ರಾಣಲಿಂಗ ಸಂಬಂಧಿಗಳಾದ ಪರಮಶಿವಯೋಗಿಗಳಿಗೆ ಸರಿಯೇ ಈ ಭ್ರಾಂತರೆಲ್ಲಾ (ಸಿದೇವ. ೦೦೬-೩೫೯). [ ನದಿ + ವಾಸಿ$_1$ ]

**ನದೀಚರ** (ನಾ). ಹೊಳೆಯಲ್ಲಿ ಸಂಚರಿಸುವುದು : ಪಿರಿದು ಪೊಱ್ತಂ ವನಪ್ರಚಾರದೊಳಲಸಿದ ನದೀಚರನಪ್ಪ ಯೂಥಪತಿಯಂತೆ ವನವಿಹಾರದೊಳಲಸಿ ಬಂದು ರಾವಣಮಂ ಪುಗೆ (ಶಾಂತಿಪು. ೮-೨೩ವ). [ ಸಂ. ]

**ನದೀಜ** (ಗು). ೧. ಹೊಳೆಯಲ್ಲಿ ಹುಟ್ಟಿದ. (ನಾ). ೨. ಹೊಳೆಯಲ್ಲಿ ಹುಟ್ಟಿದುದು ; ನೀರಿನಲ್ಲಿ ಹುಟ್ಟಿದುದು. ೩. (ಗಂಗಾ) ನದಿಯ ಮಗ ; ಗಾಂಗೇಯ ; ಭೀಷ್ಮ : ಬಿಲ್ಲ್ವೊಳ್ ಮುನ್ನಂ ಪಿನಾಕಾಯುಧನೆ ಸಕಲಚಕ್ರಾಯುಧಂ ಚಾಮುದಗ್ಗಂ ಬಲ್ಲಂ ರಾಮಂ ನದೀಜಂ (ಎಕ. VI, ಚಿಕ್ಕಮ. ೭೭-೩೯ ; 1180) ; ತತ್ಸೇನೆ ದಾವಾಗ್ನಿಯಿಂ ನೆಲೆವೆರ್ಚಿರ್ದಟವೀಪ್ರತಾನಮುರಿಯುತ್ತಿರ್ದಪ್ಪುದೆಂಬಂದಮಂ ಗೆಲೆ ಮಾಡಿತ್ತು ನದೀಜನುಗ್ರಶರಪಾತೋದ್ಭೂತಜಾತಾದ್ಭುತಂ (ಮಹಾನೇ. ೧೨-೧೬೬) ; ಮುರಹರ ಗುರು ನದೀಜರ ಬೀಳುಕೊಟ್ಟನು ಕೃಪನ ಮನ್ನಿಸಿ ಮನೆಗೆ ಕಳುಹಿದನು (ಕುವ್ಯಾಉ. ೮-೧). ೪. ಅರ್ಜುನವೃಕ್ಷ ; ನೀರುಹಲಸಿನ ಮರ ; ಕದಂಬವೃಕ್ಷ : ಕವಿಗಳ ಕೊಂಡಾಟ ವಿವಿಧರೂಪಗಳನ್ನು ತಾಳಿತು. ಮರಕ್ಕೆ ಅವರು ಕೊಟ್ಟಿರುವ ವಿಶೇಷಣಗಳನ್ನು ನೋಡಿ. ಷಟ್ಪದೇಷ್ಟ . . ನದೀಜ, ದಾಸವೃಕ್ಷ (ಹಸುಹೂ. ೪೬). [ ಸಂ. ]

**ನದೀಜಾತ** (ನಾ). = ನದೀಜ ೩ : ವೈರಾಗ್ಯಂ ಭೋಂಕನೆ ಕೆಯ್ಕೊರೆ ಮನಕ್ಕಾಗಳಾ ನದೀಜಾತಂ ಸಂಸಾರಕ್ಕೇವೈಸಿ ದಯಾಧಾರಂ ಪರಮಾತ್ಮತತ್ತ್ವನಿಷ್ಠಿತನಾದಂ (ಮಹಾನೇ. ೧೨-೧೭೩). [ ಸಂ. ]

**ನದೀತನೂಜ** (ನಾ). = ನದೀಜ ೩ : ಆಗಳ್ ನದೀತನೂಜಭಾರದ್ವಾಜ ಕೃಪರವಿರಳ ಬಾಷ್ಪವಾರಿ ದುರ್ದಿನ ದೀನಾನನರಾಗಿರೆ ವಿದುರಂ ತಾನಱಿದುಮಱಿಯದಂತೆ ಶೋಕಾಕ್ರಾಂತನಾಗಿ (ಪಂಪಭಾ. ೩-೮ ವ). [ ಸಂ. ]

**ನದೀತರಣ** (ನಾ). ಹೊಳೆಯನ್ನು ದಾಟುವಿಕೆ : ಹಯಶಾಸ್ತ್ರಂ ಸೂಪಶಾಸ್ತ್ರಂ ನದೀತರಣಂ ತಾಪನಮಿಂದ್ರಜಾಲಮೆಂಬಿತಂ ... ಅಖಿಲವ್ಯಾಹೋತ್ಕರಮೆಂಬನಿತಱೊಳಂ ಬಲ್ಲರೆಲ್ಲರುಂ ಮೆಚ್ಚೆ ಪಡೆದನತಿಕೌಶಲಮಂ (ಪುಷ್ಪಪು. ೪-೩೯). [ ಸಂ. ]

**ನದೀತೀರ** (ನಾ). ಹೊಳೆಯ ದಂಡೆ,–ತೀರ : ಬಾಳೆಯ ಗರ್ಭದೊಳಿರ್ದ ಬಾಳೆಯಂ ಬಾಳನುಮಂ ಕಂಡೆತ್ತಿಕೊಂಡು ಮತ್ಸ್ಯಗಂಧಿಯುಂ ಮತ್ಸ್ಯಗಂಧನುಮೆಂದು ಪೆಸರನಿಟ್ಟು ನಡಪಿ ಯಮುನಾನದೀತೀರದೊಳಿರ್ಪನ್ನೆಗಂ (ಪಂಪಭಾ. ೧-೬೮ ವ) ; ಆ ನದೀತೀರಕ್ಕೆ ಸಮಾಧಿಗುಪ್ತರೆಂಬ ದಿವ್ಯಮುನೀಶ್ವರರ್ ಬಂದಸ್ತಮಯಸಮಯದೊಳ್ ರಾತ್ರಿಪ್ರತಿಮೆಯೊಳಿರೆ (ಮಹಾನೇ. ೦೩-೧೦ ವ) ; ನದೀತೀರದ ರಮ್ಯಸ್ಥಾನ (ಜಸಹು. ೬೨). [ಸಂ.]

**ನದೀನಂದನ** (ನಾ). = ನದೀಜ ೩ : ನದೀನಂದನಂ ವಾರಣಾಸಿಯಂ ಪೊಱಮಟ್ಟೇಕೆ ಬಂದಿರೆಲ್ಲಿರ್ದಿರೆಂದುಂ ಬೆಸಗೊಳ್ವುದುಂ (ಮಹಾನೇ. ೯-೧೧೧ ವ) : ಈ ನದೀನಂದನನ ಬಲದಲಿ ಸೇನೆ ಶಿಖಿಗಂಜುವುದೆ (ಕುವ್ಯಾಭೀ. ೧-೩೩). [ ಸಂ. ]

**ನದೀನಾಥ** (ನಾ). ೧. ಹೊಳೆಗಳ ಒಡೆಯ ; ಸಾಗರ ; ಸಮುದ್ರ. ೨. [ಜೈನ] ಒಂದು ಕಾಲಪ್ರಮಾಣ : ಶಕ್ರಕಲ್ಪ ಷೋಡಶ ನದಿ[ದೀ]. ನಾಥೋಪಮಾಯುಷ್ಯಂಬರಂ ದಿವ್ಯ ಸುಖ ಮನಂ ಉಂಡು (ಮಹಾನೇ. ೧೫-೦೪೬ವ). [ಸಂ.]

**ನದೀನಿಕಟ** (ನಾ). ತೊರೆಯ ತೀರದ ಪ್ರದೇಶ ; ಹೊಳೆಯ ತೀರ : ವಿದಳಿತ ಕಂಜವಿಲ್ಲದ ಕೊಳಂ ಗಜವಿಲ್ಲದ ಕಱಡು ಚೂತವಿಲ್ಲದ. ಬನಮಂಚಿಯಿಲ್ಲದ ನದೀನಿಕಟಂ ... ಅತ್ಯುದಾತ್ತಗುಣವಿಲ್ಲದ ಮಾನವರಿಲ್ಲದೆಲ್ಲಯುಂ (ಪುಷ್ಪಪು. ೨-೧೦). [ ಸಂ. ]

**ನದೀಪೂರ** (ನಾ). ಹೊಳೆಯ ಪೂರ್ಣಪ್ರವಾಹ ; ತುಂಬುಹೊಳೆ : ಘನಶೋಕ : ಘನಾಗಮಜಳಜನಿತೋತ್ಕರ್ಷಮನನೂನಬಾಂಧವಜನಿತಾಶ್ರುನದೀಪೂರಮನುಡುಗಿಪುದಿನತೇಜವಸಂತದಂತೆ ಬಂದೀ ಕ್ಷಣದೊಳ್ (ಚಂದ್ರಪ್ರ. ೫-೦೪). [ ಸಂ. ]

**ನದೀಪ್ರವಾಹ** (ನಾ). ಹೊಳೆಯ ಪ್ರವಾಹ,–ಹರಿವು : "ಓಟ್ಯ–ನದೀಪ್ರವಾಹಂ" (ಶಮದ. ಪರಿ. ೧) ; ತೊಲಗಿರ್ಕೆ ಮುನಿವರರು ಒಱದೇ ಹೊಳೆಯೊಳಗೆ ಹೋಗದಿರಿ ದಿವದಿಂದಿಳಿದ ದಿವ್ಯನದೀಪ್ರವಾಹದ ಸತ್ಕೃತಮವೆನಲು ಅಲಘುಮತಿ ಕೇಳುತ್ತ ಘುಳುಘುಳುಘುಳು ಮಿಗಲು ಬಹ ನದಿಯನೀಕ್ಷಿಸಿ ತೊಲಗದಾಪೋಶನವ ಕೊಂಡನು ಜನ್ಹುಮುನಿ ನಗುತ (ನಿಭಾಗ. ೯-೮-೪೬). [ ಸಂ. ]

**ನದೀಬೂಡು** (ಗು). ನದಿಯಲ್ಲಿ ನೆರೆ ಬಂದಾಗ ನೀರಿನಲ್ಲಿ ಮುಳುಗುವ ; ಹೊಳೆ ಸಾಲಿನ : ದೇಸಾಯರ 'ನದೀಬೂಡು' ಜಮೀನು, ನಾಡಗೌಡರ 'ಮಡಿಗದ್ದೆ', ಕೇಶವರಾಯನ ಮಾವಿನ ಗಿಡಗಳು ನಿನ್ನ ಕಣ್ಣು ತುಂಬಲಾರವೆ? (ಹದ್ಯಬ. ೫೩). [ ←ಮರಾ. ನದೀಬುಡ ]

**ನದೀಮಾತೃಕ** (ನಾ). ೧. ಹೊಳೆಯ ನೀರಿನಿಂದ ಬೆಳೆ ಬೆಳೆಯುವ ಭೂಮಿ ; ನೀರಾವರಿ ಭೂಮಿ : "ತೊಱೆಯ ನೀರಿಂ ಬೆಳೆವ ಭೂಮಿ ನದೀಮಾತೃಕವೆಂಬುದು" (ಹಲಾಯು. ೨೭-೬) ; "ಹೊಳೆಯ ನೀರಿಂ ಬೆಳೆವ ಮಹಿ ನದೀಮಾತೃಕಂ" (ಮಂಗರಾ. ೨೯-೪) ; ಭೂತಲವರ್ತಿಯಪ್ಪ ವಿಷಯಾಳಿ ವಿಚಾರಿಪೊಡಾವಗಂ ನದೀಮಾತೃಕ ದೇವಮಾತೃಕಮೆ (ಚಂದ್ರಪ್ರ. ೧-೯೦) ; ಅದಲ್ಲದೆಯುದೆ ನದೀಮಾತೃಕಮುಂ ದೇವಮಾತೃಕಮುಮೆಂಬ ಭೇದಮಂ ಬೇರ್ಪಡಿಸಿ (ಪುಷ್ಪಪು. ೨-೦೪೫) ; ನೂತನ ನಾರಿಕೇಳಜಲದಿಂ ಧವಳೇಕ್ಷುಗಳಾವಗಂ ನದೀಮಾತೃಕ ದೇವಮಾತೃಕದ ಪಂಗುಳಿದೊಳ್ಪೆಳಸಾಗಿ ರಂಜಿಕುಂ (ತ್ರಿಪುವಿ. ೨-೩೭); ಬೆಳೆವುವು ಶಾಲಿ ಪಾಮರಿಯರ ಮೊಗಸುಗಿವೆಳಗಿಗೊಸರುವಿಂದುಕಾಂತದ ಜಲದಿಂದೆ ದೇವಮಾತೃಕ ನದೀಮಾತೃಕಗಳ ಬಗೆಗೊಳದಾ ನಾಡೊಳು (ತ್ರಿಭುತಿ. ೨-೧೪). ೨. ಗದ್ದೆ ; ತರೀ ಜಮೀನು. 'ದೇವಮಾತೃಕ' ಪರಾ. [ ಸಂ. ]

**ನದೀಮಾತೃಕೆ** (ನಾ). = ನದೀಮಾತೃಕ ೧ : ದೇವಮಾತೃಕೆ ನದೀಮಾತೃಕೆಯಾದ ನಾನಾವಿಧ ಬೆಳೆಯ ಭೂಮಿಗಳು ಅವಾಗ ಬೆಳೆದೊಱಗುವ ಧಾನ್ಯಸಂದೋಹಕಾವಾಸವಾಗಿರುತಿಹುದು (ನಾಗಕು. ೨-೧೮). [ ಸಂ. ನದೀಮಾತೃಕಾ ]

**ನದೀಮುಖ** (ನಾ). ಹೊಳೆಯು ಸಮುದ್ರಕ್ಕೆ ಸೇರುವ ಸ್ಥಳ; ಅಳಿವೆ: ಸ್ವಯಂಭೂರಮಣ ಸಮುದ್ರದ ಮಹಾಮತ್ಸ್ಯಂಗಳ್ಸಾಸಿರಯೋಜನದೀರ್ಘಂ ನದೀಮುಖದೊಳು ಐನೂಱು ಯೋಜನ ನೀಳಂ (ಶ್ರಾವಕಾ. ೦೨೩) ; ನದೀಮುಖ (The mouth) ಅಂದರೆ ನದಿಯು ಸಮುದ್ರಕ್ಕೆ ಸೇರುವ ಸ್ಥಳ (ಭೂಗೋಳ. ೦೨) ; ಗಂಗಾನದಿಯಲ್ಲಿ ನದೀಮುಖದಿಂದ ಎಪ್ಪತ್ತುಮೈಲಿಗಳವರೆಗೂ ಜಹಜುಗಳು ಹೋಗುತ್ತವೆ (ಸಕದ. ೨೦) ; ಈ ವಲಯದಲ್ಲಿ ನದೀಮುಖಗಳಲ್ಲಿರುವ ಮೆಕ್ಕಲುಮಣ್ಣು ನೀರಾವರಿಗೆ ಅನುಕೂಲವಾಗಿದೆ (ಶಿಲ್ಪಸಾ. ೩೬೧). [ ಸಂ. ]

**ನದೀಮುಖಖಂಡ** (ನಾ). = ನದೀಮುಖಜಭೂಮಿ: "ನದೀಮುಖಖಂಡ ಅಥವ ಡೆಲ್ಟ (Delta)" ಅಂದರೆ ಒಂದು ನದಿಯ ಮುಖಭಾಗದಲ್ಲಿರುವ ತ್ರಿಕೋಣಾಕಾರವಾದ ಭೂಮಿ (ಭೂಗೋಳ. ೧೩). [ನದೀಮುಖ + ಖಂಡ]

**ನದೀಮುಖಜಭೂಮಿ** (ನಾ). ನದಿಯು ಸಮುದ್ರಕ್ಕೆ ಸೇರುವಲ್ಲಿ ನಿರ್ಮಾಣವಾಗುವ, ಮೆಕ್ಕಲುಮಣ್ಣಿನಿಂದ ಕೂಡಿದ ನೆಲ; ಮೆಕ್ಕಲು ಭೂಮಿ; ಜಲಾನಯನ ಭೂಮಿ: "ನದೀಮುಖದಲ್ಲಿ ಇಂತಹ ತ್ರಿಕೋನಾಕಾರವಾಗಿ ಏರ್ಪಟ್ಟ ಮೆಕ್ಕಲುಭೂಮಿ : ನದೀಮುಖಜಭೂಮಿ; ಕುದುರು" (Delta. ಇಂಕನಿ) ; ನದಿಗಳು ತಮ್ಮ ಗತಿಗಳನ್ನು ಬದಲಾಯಿಸುವುದು, ನದೀಮುಖಜಭೂಮಿಗಳೆಂದು ಹೊಸ ಪ್ರದೇಶಗಳು ಸಿದ್ಧವಾಗುವುದು . . . ಮುಂತಾದುವು ಪ್ರಕೃತಿಯಲ್ಲಿಯೇ ನಡೆದಿರುವ ಘಟನೆಗಳು

(ಭಾಇಪ್ರ. ೮) ; ದಕ್ಷಿಣ ಭಾರತದ ನದಿಗಳು . . . ಸಮುದ್ರ ಸೇರುವ ನದೀಮುಖಜಭೂಮಿಯಲ್ಲಿ ಮಾತ್ರ ಅವು ಭೂಮಟ್ಟದಲ್ಲಿ ಹರಿಯುತ್ತವೆ (ನನದಿ. ೨೨). [ ಸಂ. ]

**ನದೀಮೂಲ** (ನಾ). ನದಿಯ ಉಗಮಸ್ಥಾನ ; ನದಿಯು ಹುಟ್ಟುವ ಸ್ಥಳ : "ನದೀಮೂಲ" (Source) ಅಥವ "ಉಗಮ" ಎಂದರೆ ನದಿಯು ಹುಟ್ಟುವ ಸ್ಥಳ (ಭೂಗೋಳ. ೧೨) ; ಋಷಿಮೂಲವನ್ನೂ ನದೀಮೂಲವನ್ನೂ ಗುರುಮೂಲವನ್ನೂ ಹುಡುಕಬಾರದು (ರೂಢಿ). P ಈ ರೀತಿಯಲ್ಲಿ ಮೂಲಗಳನ್ನು ಬೆದಕುತ್ತಾ ಹೋದರೆ ಅಪ್ರಿಯವಾದ ವಿಷಯಗಳು, ಅಪಾಯ ಪ್ರಸಂಗಗಳು ಉಂಟಾಗುತ್ತವೆ ಎಂಬುದು ರೂಢಿ ವಾಕ್ಯದ ತಾತ್ಪರ್ಯ. [ ಸಂ. ]

**ನದೀಯೋಜನೆ** (ನಾ). ನದಿಗಳಿಂದ ಉಪಯೋಗ ಪಡೆಯಲು ಅಣೆಕಟ್ಟು ಕಟ್ಟುವ ವ್ಯವಸ್ಥೆ, ಏರ್ಪಾಡು : ನದೀಯೋಜನೆಗಳು ನಮ್ಮ ದೇಶದ ಇಂಜಿನಿಯರ್‌ಗಳ . . . ಕೆಲಸಗಾರರ ಪ್ರತಿಭೆಯ ಪ್ರತೀಕಗಳು (ನನದಿ. ೩೪). [ ಸಂ. ನದೀಯೋಜನಾ ]

**ನದೀಸರ್ಜ** (ನಾ). ಒಂದು ಬಗೆಯ ಮರ ; ಅರ್ಜುನವೃಕ್ಷ ; ಮತ್ತಿ ಮರ : "ನದೀಸರ್ಜಃ, ವೀರತರುಃ, ಇಂದ್ರದ್ರುಃ, ಕಕುಭಃ, ಅರ್ಜುನಃ– ೫ ತೊರೆಮತ್ತೀಗಿಡ, ಕೆಂಪುಮತ್ತೀಗಿಡ, ರಕ್ತಾರ್ಜುನವೃಕ್ಷ" (ಸಿದ್ಧಾಂತಿ. ೧೨೨). [ ಸಂ. ]

**ನದೀಸುತ** (ನಾ). = ನದೀಜ ೩ : "ನಾದೇಯಃ, ನದೀಸುತಃ–ಈ ೨ ನದಿಯ ಮಗಂ" (ಹಲಾಯು. ೮೨-೩೪೭) ; ಗುರು ಗುರುಪುತ್ರ ಶಲ್ಯ ಭಗದತ್ತ ನದೀಸುತರೆಂಬ ಸಂದ ಬೀರರೆ ಮಱುವಕ್ಕಂ (ಪಂಪಭಾ. ೧೧-೧೨); ತ್ರಿದಶನದೀಸುತನಿಂ ತೀರದ ಕಜ್ಜಂ ಮುನ್ನಂ ಕಳಶಸಂಭವನಿಂ ತೀರದ ಕಜ್ಜಮಿನಜನಿಂ ತೀರದ ಕಜ್ಜಂ ದ್ರೋಣಪುತ್ರನಿಂ ತೀರ್ದಪುದೇ (ಗದಾಯು. ೩-೭೦) ; ಆ ನದೀಸುತನಡಿಗೆಱಗಿ ರವಿಸೂನು ಕಳುಹಿಸಿಕೊಂಡು ಬಹಳ ಮನೋನುರಾಗದಲೈದಿದನು ಕುರುರಾಯನೋಲಗವ (ಕುವ್ಯಾ. ದ್ರೋ. ೧-೭೨). [ ಸಂ. ]

**ನದೀಸೂನು** (ನಾ). = ನದೀಜ ೩ : ಕಾನೀನಂ ದ್ರೋಣ ನದೀಸೂನುಗಳ ಬೞಿಯಿಂ ಬೞಿಕ್ಕೆ ಪೆಱರೆನಗಿಲ್ಲೆಂದಾನೆ ಗಳಿತಾಶ್ರುಜಲದಿಂ ಸೇನಾಪತ್ಯಾಭಿಷೇಕಮಂ ಮಾಡಿದಪೆಂ (ಗದಾಯು. ೩-೭೭). [ ಸಂ. ]

**ನದೀಹ್ರದ** (ನಾ). ನದಿಯ ಆಳವಾದ ಭಾಗ ; ಮಡುವು : ಜಳಾವಗಾಹಾಸಿಯಿಂ ವೈತರಣಿಯ ಪಿರಿಯ ದರಿಯಂ ಮೆಟ್ಟಿ ನುಣ್ಣಗಲಂ ಮಣಲ್ದಿಂಟೆಗೆತ್ತುದಱ ಪರಿತಪ್ತಲೋಹರಜಃಕಣಿಕತಿಳತಳದೊಳ್ ಮೆಯ್ಯನೀಡಾಡುವುದುಂ . . . ಅಂತಲ್ಲಿಯುಂ ಸೈರಿಸದೆ ನದೀಹ್ರದಮಂ ಪೊಗುವುದುಂ (ಶಾಂತಿಪು. ೭-೯೨ವ). [ ಸಂ. ]

**ನದುಗು₁** (ಕ್ರಿ). ಪರಾಙ್ಮುಖವಾಗು ; ಮುಖ ತಿರುಗಿಸು : ಒದವಿದ ಪುರುಡಿಂದಂ ನೋಡದು ನುಡಿಯದು ಪೊರ್ದದೆನಿತು ಕಾಲ್ವಿಡಿದೊಡಮೊಲ್ಲದು ಕಿನಿಸಿ ಕಡುಪಿನಿಂದಂ ನದುಗಿದಪುದು ತಿಳಿಯದೆಂತುಮಾರ್ ತಿಳುಪಿದೊಡಂ (ಕಾದಂಬ. ೭೭). [ ? ]

**ನದುಗು₂** (ನಾ). ಗುನುಗು : ಮಾವನ ಕಡೆಯಿಂದ ಎಲ್ಲಾ ಬಂದಿದೆ ಅವನಿಗೇನು ನದುಗು ? (ರೂಢಿ). [ ? ]

**ನದುರು** 'ನಜರು' ನೋ.

**ನದರುಗಾಣಿಕೆ** 'ನಜರುಗಾಣಿಕೆ' ನೋ.

**ನದುಳು** (ಗು). ೧. ಒಳಗಿರುವ ; ಹುದುಗಿರುವ ; ಮುಚ್ಚಿಟ್ಟಿರುವ : ಕೆದರಿದಾಲಿಯ ಕಿಡಿಯ ಮಾಲೆಯ ವದನದೆಗಹಿನ ದಾಂಷ್ಟ್ರ ಬಿಗುಹಿನ ನದುಳು ಜಿಹ್ವೆಯ ಗಳದ ಹೃಂಹೆಯ ಸುಯ್ಲ ಹೊಯ್ಲುಗಳ ಏಡೆಯ ನಾಮದ ಬದಿಯ ರೋಮದ ತ್ರಿದಳ ಕರ್ಣದ ಕದಳಿವರ್ಣದ ಮದದ ಕೇಸರಿಯುದಿಸಿ ರೋಷದಿ ಕವಿದವರಿಭಟನ (ಅಂಬಿಕಾ. ೩೨-೩೮). (ನಾ). ೨. ಮುಚ್ಚಿಟ್ಟಿರುವಿಕೆ ; ಹುದುಗಿರುವಿಕೆ : ವಿಷದ ಲಹರಿಯ ಲಳಿಯ ನದುಳಿನ [ಪಾಠಾಂ. ಉಸುರಿನ] ಹಸರಿಕೆಯ ಚೂರಿಸುವ ಜಿಹ್ವಾಪ್ರಸರದುರುಪೂತ್ಕಾರದಹಿಪಂಜರದ ಮಧ್ಯದಲಿ ಎಸೆದನೈ ಲವ (ತೊರರಾ. ೬-೧೭-೯). 'ನದುಳುನಗೆ' ಪರಾ. [ ? ]

**ನದುಳುನಗೆ** (ನಾ). ಹೊರತೋರದ ನಗೆ ; ಹತ್ತಿಕ್ಕಿದ ನಗೆ ; ಅಂತರಂಗಿಕವಾದ ನಗೆ : ನೋಡಿದುದಖಿಳಖಿಳನಿಕರ ನದುಳು [ಪಾಠಾಂ. ಪುದಿದ]ನಗೆಗಳ ಮೊಗದ ಮುರುಹಿನ ವದನದರಮುಸುಕುಗಳಲಿದ್ದುದು (ತೊರರಾ. ೩-೭-೦೩) ; ನ[ಪಾಠಾಂ. ನು] ದುಳುನಗೆಗಳಲಿವರು ಮೂವರು ಪುದಿದ ಪರಿತೋಷದಲಿ ರಾಮನ ಪದಪಯೋಜವ ಸಾರಿದರು ಕಪಿಕಟಕ ನಲಿದಾಡೆ (ತೊರರಾ. ೬-೨೭-೬೨). [ ನದುಳು + ನಗೆ ]

**ನದ್ಧ** (ಗು). ೧. ಸೇರಿರುವ; ಕೂಡಿಕೊಂಡಿರುವ ; ಕಟ್ಟಿದ. (ನಾ). ೨. ಬದ್ಧನಾದವನು ; ಒಳಪಟ್ಟವನು ; ಸೇರಿದವನು : "ಬದ್ಧಃ, ನದ್ಧಃ, ಸಂಯುತಃ–ಈ ೩ ಕಟ್ಟುಪಟ್ಟವಂ" (ಹಲಾಯು. ೫೭-೦೮೫) ; ಕರಿಸೇನಾಸಾರಿನದ್ಧೋತ್ತರಳಕದಳಿಕಾಕಾನನೋಚ್ಚುಂಬ್ಯಮಾನಾಂಬರಚಕ್ರಂ (ಆದಿಪು. ೪-೨೪). [ ಸಂ. ]

**ನದ್ಧ್ರೀ** (ನಾ). ಚರ್ಮದ ಪಟ್ಟಿ ; ತೊಗಲಿನ ಹಗ್ಗ : "ನದ್ಧ್ರೀ ವದ್ಧ್ರೀ ಸಂಜ್ಞೆಯದು ವರತ್ರೆಯೆನಿಕ್ಕುಂ" (ವಸ್ತುಕೋ. ೫೧-೩೭) ; ನದ್ಧ್ರೀ, ವದ್ಧ್ರೀ, ವರತ್ರಾ–೩ ತೊಗಲ ಮಿಣಿಯ ಪೆಸರು, ತೊಗಲ ಹಗ್ಗ" (ಸಿದ್ಧಾಂತಿ. ೨೩೯). [ ಸಂ. ನದ್ಧ್ರೀ ]

**ನದ್ಯಂಬು** (ನಾ). ನದಿಯ ನೀರಿನ ಆಶ್ರಯ. [ ಸಂ. ]

**ನದ್ಯಾಮ್ಲ** (ನಾ). ಒಂದು ಬಗೆಯ ಸಸ್ಯ : "ಉಪಕರದಂತಿ–ನದ್ಯಾಮ್ಲ" (ಓಷಧಿ. ೧೭). [ <ಸಂ. ನದ್ಯಾಮ್ಲ ]

**ನದ್ಯುತ್ತರಣ** (ನಾ). ನದಿಯನ್ನು ಹಾಯುವಿಕೆ, ದಾಟುವಿಕೆ : ಅಂತುಭಯನದಿಯ ವೃಷವ್ಯಮುನಾಶ್ಚರ್ಯಮಂಬಟ್ಟು ನೋಡಿ ನದ್ಯುತ್ತರಣೋಪಾಯಮಾವುದೆಂದು ಬಗೆದು (ಆದಿಪು. ೧೩-೫೧ವ). [ ಸಂ. ]

**ನನವತಿ** (ನಾ). ಒಂದು ಸ್ಥಳದ ಹೆಸರು : ನೆಲ್ಲಿ ಕುಡಿಕ್ಕೆಱುವಳೆ ನನವತಿ ಸಾಗಲ ತಟಾಕಸ್ಕಾತ್ (ಮೈಆರಿ. ೧೯೩೯, ೩೦-೩೯ ; 670). [ ? ]

**ನನವರಿಕೆ** 'ನೆನವರಿಕೆ' ನೋ.

**ನನಸು, ನೆನಸು₁** (ನಾ). ನಿಜಸ್ಥಿತಿ ; ವಾಸ್ತವಸ್ಥಿತಿ ; ಸತ್ಯ ; ದಿಟ ; ನಿಶ್ಚಯ : "ನನಸು = ದಿಟಂ" (ಕಮುದ. ಪರಿ. ೨) ; "ನನ್ನಿ, ನಿಕ್ಕುವಂ, ನಿಸದಂ, ಸಾಜಂ, ನ[ಪಾಠಾಂ. ನೆ]ನಸು, ದಿಟಂ–ಈ ೬ ಸತ್ಯಂ" (ಕಕಸಾ. ೦೩-೨೪೪) ; ಪುಳಿನತರಿಸರಪ್ರದೇಶದೊಳ್ ಮಱೆದೊಱಗುವೈರಾವತದಂತೆ ಪವಡಿಸಿ ಕೆಱುದಾಸಂ ಬೇಗದೊಳ್ ಸುಭದ್ರೆಯುಂ ಕನಸಿನೊಳ್ ಕಂಡು ನನಸೆಂದು ಬಗೆದು (ಪಂಪಭಾ. ೪-೧೦೦ವ) ; ಭೀತಿಯುಂಬಟ್ಟದನೆ ಕನಸು ಗಂಡುಮ್ಮಳಂಗೊಂಡು ಚೋದ್ಯಂ ನನಸೆಂದೆಚ್ಚತ್ತಿರುತ ತಂನೆಯ ತಲೆಯನತಿಭ್ರಾಂತನಂದಿಂದು ನೋಳ್ಪಂ (ಎಕ. VII, ಶಿವಮೊ. ೬೪-೩ ; 1112) ; ಕನಸೆಂದೊಡಂ ನನಸೆಂದಾಳ್ದಳ್ [ಪಾಠಾಂ. ನೆನಸೆನುತ್ತಾಂತಳ್] ಮಹಾಚಿಂತೆಯಂ (ಜಗವಿ. ೧೭-೧೦೭) ; ತಮ್ಮ ಕಲ್ಪನೆಯ ಕನಸನೆ ನನಸಿನ ನನ್ನಿ ಎಂಬಂತೆ ಏನೇನೊ ಕಣವೇಳುತಿಹುದವರ ಚಾಳಿ (ಚಂದ್ರಸ. ೧೨-೨೨); ಅವಳು ಕನಸಿನಲ್ಲಿ ಮೈತೋರಿ, ನನಸಿನಲ್ಲಿ ನಿಧಿಯನ್ನು ತೋರಿಸಿಕೊಟ್ಟಳು! (ರಾಜ್ಯೋದ. ೧೮೭). **ನೆನಸು₁ :** "ನೆನಸೆಂದು ದಿಟಂ" (ಚತುವಿ. ೮೯೦) ; "ನನ್ನಿ ಸಾಜ ನೆನಸುಂ ದಿಟಮೆಂದುಸಿರಲ್ಕೆ ಸತ್ಯಮಕ್ಕುಂ" (ಕವಿಕಂ. ೧೨೦); "ನೆನಸೆನಲ್ ನಿಶ್ಚಯಂ" (ಕಜಿ. ೫೭) ; ಕನಸಂ ಧನದತ್ತಂ ನೆನಸೆಂದು ಭೋಂಕನೆಚ್ಚತ್ತು (ಪಂಚತಂ. ೯೧೦-೦೦) ; ಕನಸಿಂದಂ ನೆರೆದಘನರ ನೆನಸಿಂ ನೆರೆದಪ್ಪೆನೆಂದು ತರವೇಟ್ಟದ್ದವೆ ಕುಂತನಂ ((ಜಗವಿ. ೧೭-೧೦೨); ಧನುಜರಟ್ಟಿದ

ಕನಸ ಕಂಡರೆ ನೆನಸಿನಲಿ ನರರಂಜುತಿಪ್ಪರು (ಶಾಶಿರಾ. ೩೩-೮); ಮಬ್ಬುವಗಲುದಯದೊಳರಸಂ ತುಱುಗಿರೆ ಕಡುಹರಿಸಮಿರುಳ ಕನಸಂ ನನಸೆಂದೞಿವಲಳಸಿಂಗ ರಾ ಯ ರ್ಗ ರ ನು ಱ ದಿ ಂ ದ ಂ ಕರೆಯಲ್ಪಟ್ಟದಂ ಪಡಿಯಱರಂ (ಚಿಕವಿ. ೩-೧೦೦).

ನನಸಾಗು, ನೆನಸಾಗು = ಪ್ರತ್ಯಕ್ಷವಾಗಿ ಕಾಣುವಂತಾಗಂ; ವಾಸ್ತವವಾಗು: ನುಡಿದೊಡಂ ಬರೆಯಿಸಿದೊಡಂ ಕಳಿಪಿದೊಡಂ ನನಸಾಗಿ ತೋಱಲಕ್ಕುಮೆ (ಧರ್ಮಾ. ೧೦-೧೮೮); ಅವನು ಕಾಣುತ್ತಿದ್ದ ಕನಸುಗಳೆಲ್ಲಾ ನನಸಾದವು (ರೂಢಿ): ಅಂತುದಾರಮಹೇಶ್ವರನೀಶ್ವರವರಪ್ರಸಾದವೆಲ್ಲಂ ತನಗೆ ನೆನಸಾಗೆಯುಂ ಕನಸಿನಂದದವಾಗಿ ತೋಱೆ (ಪಂಪಭಾ. ೧೧-೧೩೦ ವ).

[ ದೇ.೩ ತಮಿ. ನನವು, ನನಾ ]

**ನನಸುಗಿರು** (ಕ್ರಿ). ದಿಟವೆಂದು ಭಾವಿಸು; ನಿಜವೆಂದು ಭ್ರಮಿಸು: ಅಹುದೆ! ಬರಿದೆ ಬೆದರಿದೆ, ಅಜ್ಜ, ಕನಸಂ ನನಸುಗೆತ್ತು! (ಚಂದ್ರಸ. ೨೭-೨೩).

[ ನನಸು + ಗಿರು (< ಗಿಱು) ]

**ನನಾಂದೃ** (ನಾ). ಗಂಡನ ಸೋದರಿ; ನಾದಿನಿ ಅಥವಾ ಅತ್ತಿಗೆ: "ನಾದುನಿ ನನಾಂದೃ ನಂ [ನಾ] ದಿನಿಯೆನಿಕುಂ" (ವಸ್ತುಕೋ. ೫೭-೨೪); ಋಕಾರಾಂತಕ್ಕೆ-ಪಿತೃ, ಸವಿತೃ . . . ನನಾಂದೃ, ಯಾತೃ, ಮಾತೃ, ಧಾತೃ (ಶಮದ. ೮೪ ಪ್ರಯೋ). [ ಸಂ. ]

**ನನೂರು** 'ನಾಲ್ನೂಱು' ನೋ.

**ನನೆ₁, ನೆನೆ₂** (ಕ್ರಿ). ನನೆತು, ನನೆದು, ನೆಂದು, ನೆನೆದು (ಭೂತಕೃ). ೧. ಆರ್ದ್ರವಾಗು; ಒದ್ದೆಯಾಗು; ತೋಯು: "ನನೆ-ಆರ್ದ್ರಭಾವೇ, ಪುಷ್ಪಕುಟ್ಮಲೇ ಚ (ಮೊಗ್ಗು)" (ಶಮಧಾ); ಅಂತೆಟ್ಟತ್ತು ನೆತ್ತರ ಪೊನಲೊಳ್ ನಾಂದು ನನೆದ ಮೆಯ್ಯುಮಂ ತೊಯ್ದು ತಳ್ಪೊಯ್ದ ಜಡೆಯುಮಂ ಕಂಡು (ಪಂಪಭಾ. ೧-೧೦೩ ವ); ನಿರವಧಿಪ್ರೇಯಪ್ರೀತಿವಹನಂ ಪುಳಕದೊಳ್ ನನೆತು ಹರ್ಷದೊಳರಲ್ದು ಆನಂದಾಶ್ರುಭರದೊಳ್ ತುಳುಂಕಿ (ಅನಂಪು. ೩-೩೩ವ); ಮೊಮ್ಮಂದಿರುಗಳಳಲಿನ ಘನತೆಯನು ಕಿವಿಗೊಟ್ಟು ಕೇಳಿದು ನನೆದುದಂತಃಕರಣ ಕಂಬನಿದುಂಬಿದನು ಭೀಷ್ಮ (ಕುಮಾಭೀ. ೭-೨೪); ಎಲೆ ವನಜಾಕ್ಷ ಬೆಟ್ಟುಮಂ ಕೊಡೆವಿಡಿದು ಪಟ್ಟಿಯಂ ನನೆಯಲೀಯದವೋಲೀ ಪಾರ್ಥನಂ ರಕ್ಷಿಸುವೆ ನೀಂ ಕೃಪೆಯೊಳು (ಜೈಮಿಭಾ. ೦೩-೩೯). ೨. ನೀರನ್ನು ಹೀರಿ ಮೃದುವಾಗು,-ಮೆಂತ್ತಗಾಗು: ಕಲ್ಲಿಂತುಂ ನನೆಯದವೋಲ್ ಪೊಲ್ಲಮೆಯೊಳ್ ಕೂಡಿ ರೌರವಕ್ಕಿಟಿವವರುಂ ಸಲ್ಲಲಿತಮಪ್ಪ ಧರ್ಮಕ್ಕೆಲ್ಲಿ ಯುಮೋರಂತೆ ಬಾರರಘವಶದಿಂದಂ (ಧರ್ಮಾಮೃ. ೧೦-೧೬೬); ಉತ್ತಮದ ಸೊಜ್ಜಿಗೆಯ ಬಟ್ಟವಾಲೊಳು ನನೆಹಿ ಮತ್ತೆ ನನೆ [ಪಾಠಾಂ. ಮೆತ್ತನಾ]ದಾಗ ತೆಗೆದದನು ಪಿಟ್ಟೆಯ ಹಿಟ್ಟನೊತ್ತಿ (ಸೂಪಶಾ. ೧-೧೧). **ನೆನೆ₂**: ೧. ಎಱೆದರೆ ನೆನೆಯದು ಮಱೆದರೆ ಬಾಡದು ಹುರುಳಿಲ್ಲ ಹುರುಳಿಲ್ಲ ಲಿಂಗಾರ್ಚನೆ (ಬಸವ. ೧೯೩); ಚಿತ್ರಜಾಂತಕನೊಂದುದಿನವುದ್ಧೃತ್ತಪೋಧನ ವೇಷದಿಂ ನೆನೆವುತ್ತ ಮಳೆಯೊಳು ನಡುಗುತಂ ನಡುವಿರುಳು ನಡೆತರಲು (ಬಸಪು. ೨೭-೯೭); ಸೂ ಕ್ತಿ ಸು ಧಾ ರ ಸ ದಿ ನೆಱೆ ನೆನೆದುದಾತನ ಮೈವಿಲೋಚನವಾರಿಪೂರದಲಿ (ಕುಮಾಕ. ೧೭-೨೩); ಮೊದಲೇ ಸೀಮೆಎಣ್ಣೆಯಲ್ಲಿ ನೆಂದ ಚಂಡು ಉರಿಯತೊಡಗಿತು (ಗೋಪುರ. ೯೪); ನೆನೆದ ಕಲ್ಲು ಮೆತ್ತಗೆ ಆದೀತೇ? (ಗಾದೆ). ೨. ಕೂಡಲಸಂಗಮದೇವ ಬಱಿಯುದಕದಲ್ಲಿ ನೆನೆವನೆ (ಬಸವ. ೦೮೪); ಧರಣಿ ನೆನೆದುದು ಗಂಧರಸಕಸ್ತುರಿಯ ಪನ್ನೀರುಗಳ ಹೊನಲೊಡೆವೆರಸಿ (ಕುಮಾವಿ. ೧೧-೯೩). 'ನೆನೆಗಡಲೆ', 'ನೆನೆಯಕ್ಕಿ₁' ಪರಾ. [ ದೇ.೩ ತಮಿ. ನನ್ನೈ; ಮಲ. ನನ, ನನೆ; ತುಳು. ನನೆ; ಕೊಡ; ನೆಲೆ, ನೆಲ ]

**ನನೆ₂** (ಕ್ರಿ). ೧. ಹೂವು ಬಿಡು; ಮೊಗ್ಗಾಗು; ಮುಂಗುಳಾಗು: "ನನೆತು ದೆಂದು ನನೆವೆತ್ತುದು" (ಶಶಾ. ೯-೦೯೮); "ನನೆತುದು ನನೆಯೇಱಿದುದು" (ಕವಿಕಂ. ೭೭); "ನನೆತುದೆನೆ ಮೊಗ್ಗೇಱಿದುದು" (ಶಶಿ. ೫೩); ತಳತಳ ಱಗುವಶೋಕೆಗಳುಂ ನನೆತೆಲ್ದ ಜಾದಿಗಳುಂ ಮುಂಗುಳ್ತು ಮಂಜಿವ ಮೊಲ್ಲೆಗಳುಂ (ಲೀಲಾವ. ೬-೬೦ ವ); ಬೆಳಕು ಚೆಂಕಿ ಬೆರೆತುಕೊಂಡು ಭಾವವು ಹೊರದೊಡಿರೆ ಬಾಳು ಮೊಳೆತು ಸುಗ್ಗಿ ನನೆತು ಹೂವಿನಂತೆ ಮಾಡಿರೆ (ಗಂಗಾತ. ೨೩-೭). ೨. ಚಿಗುರು ಬಿಡು; ಅಂಕುರಿಸು. 'ನನೆಪೊಯ್' ಪರಾ. [ ದೇ.೩ತಮಿ. ನನ್ನೈ; ತೆಲು. ನನಯು, ನನಚು, ನನುಚು ]

**ನನೆ₃** (ನಾ). ೧. ಅರಳದ ಹೂವು; ಮೊಗ್ಗು; ಕುಟ್ಮಲ: "ನನೆ-ಆರ್ದ್ರ ಭಾವೇ, ಪುಷ್ಪಕುಟ್ಮಲೇ ಚ" (ಶಮಧಾ); "ನನೆ ಕುಟ್ಮಲಂ" (ಕಶಸಾ. ೯-೦೫೩); "ನನೆಯೆನಲು ಕುಟ್ಮಳಮಕ್ಕು" (ಕಶರ. ೫೩); ನನೆಯ ಕೊನೆಯ ತಳಿರ ಮುಗುಳ ವನಲತಾನಿಕುಂಜದಿಂ ಪ್ರಸೂನರಜದ ಪುಂಜದಿಂ (ಪಂಪಭಾ. ೧-೫೮ ರಗಳೆ); ಬನದಿಂ ಬನಕ್ಕೆ ನನೆಯಿಂ ನನೆಗಲರಿಂದಲರ್ಗೆ ಪೊರೆದು ಬರಯಿಗಳೆರ್ದೆ ಪೌವನೆ ಪಾಱೆ ಪಾಱುಗುಂ ಕಾಮುನಿಕಾಮುಶಿಲೀಮುಖರ ಶಿಲೀಮುಖನಿವಹಂ (ಮಲ್ಲಿಪು. ೨-೪೦); ತುಱುಗಿದ ತಳಿರಿಂ ನನೆಯಿಂ ಕಿಱು ವಿಡಿಯಿಂದೆಸೆದುದಸದಳಂ ಮಾಕಂದಂ (ಕಾವ್ಯಾವ. ೨೩೨); ಸಣ್ಣ ನನೆಯೊಳಗಣ ಪರಿಮಳವ ಹೊ ಱ ಸೂ ಸಿ ಇದಿರಿಂಗಱುಹಿಸಬಲ್ಲುದೇ ವಾಯು (ದೇವಾಶ. ೬೩-೦೨೮); ಸಂಪಗೆಯ ನನೆಗೆಯ್ದ ಬೞಿಕೊಯ್ವಗೆ ಜಾಱುವ ತುಂಬಿ ನಗಿಸಿದುದು ಮಲ್ಲಿಗೆಯಂ (ಕಬ್ಬಿಕಾ. ೫೮); ತನುಪುಳಕ ತಲೆದೋಱೆ ರೋಮಾಂಚನದ ಬಿಗುಹಡಗಿತ್ತು ಕಂಗಳ ನನೆಗಳರಳಿದವಾಯ್ತು ಭೀಷ್ಮಂಗಿತ್ತಣವಧಾವ (ಕುಮಾದ್ರೋ. ೦-೨೨); ಪೂವಳ್ಳಿಗಳ್ ನನೆಕೊನೆ ಮುಗುಳರೆ ಮುಗುಳ್ ಬಿರಿಮುಗುಳಂಳ್ಕಲರ್ದ ಪೊಸಮಲರ್ಗಳಿಂದೆ ಸೊಗಯಿಸೆಯುಂ, ಮನೋಹರಮಪ್ಪುದಾಯ್ತು ಪೊಸಸುಗ್ಗಿ (ರಾಮಾಕ. ೧೭-೧). ೨. ಹೂವು; ಪುಷ್ಪ: ಕಂಪುಮಂ: ನನೆಯನ ಪೇಱೆ ಕಂದಳರೊಳೆಯ್ದೆ ಬಟಲ್ದೆಳಮಾವು (ಆದಿಪು. ೧-೬೪). 'ನನೆಗಣೆ', 'ನನೆವಾಸು₁' ಪರಾ.

ನನೆಯ ಕೋಲ್=ಹೂಬಾಣ; ಪುಷ್ಪಬಾಣ ನೀಂ ನಾಲ್ಕೆರಡಾ ಪಗಲೊಳೆವಮ್ಮಡಿಯನ ಕೈಯ ನನೆಯ ಕೋಲ ಕಾಲಾಟಮಂ ಕಾಣ್ಬೆನೆನುತೋಲಗಸಾಲೆಯಂ ಪೊಱಮಟ್ಟು (ಕಬ್ಬಿಕಾ. ೧೮೮). ನನೆಯ ಶಿಶು = ಮೊಗ್ಗು; ಮುಗುಳು: ಜ್ಞಾನಿಯ ಸಂಗ ನನೆಯ ಶಿಶುವಿನಂತಿರಬೇಕು ಜ್ಞಾನಿಯ ಸಂಗ ಭಾನುವಿನ ತಾವಿನಂತಿರಬೇಕು (ಮೋಹನತ. ೯೭-೩೦೫). ನನೆಯ ಸರ = ಪುಷ್ಪಬಾಣವನ್ನುಳ್ಳವನು; ಕಾಮ; ಮನ್ಮಥ: ನನೆಯ ಸರಂಗೆ ಚಿತ್ತದೆಡೆಯಂ ಕುಡದಿರ್ದನ ಪೆಂಪು ಜಾಣ್ ಜಸಂ . . . ಕೂರ್ಪು ಪೊಡರ್ಪೆಸೆದಿರ್ಪುದು (ಶಾಂತೀಶ. ೬-೬೨). ನನೆಯ ಸರಲ್=ನನೆಯ ಕೋಲ್: ನನೆಯ ಸರಲ್ಗಳುಮಂ ಕಬ್ಬಿನ ಬಿಲ್ಲುಮನೊಲ್ಲದಿಲ್ಲಿಗವತರಿಸಿದನಂಗನನೆಯ್ದೆ ಕಾಣ್ಬವೋಲ್ ಕಂಡು ನೃಪಕುಮಾರರ್ ಸ್ವಯಂವರಾಸೆಯನುಱಿದರ್ (ಶಾಂತಿಪು. ೫-೯೪); ನನೆಯ ಸರಲ್ಗಳಂತೆ ನೆಱೆದಿಂಗಳ ತಣ್ಣದಿರಂತೆ . . . ಲೋಲಲೋ ಚ ನ ರು ಚಿ ಸು ತ್ರಿಮುತ್ತಿದುದಶೇಷನೃಪಾಲಸಭಾಂತರಾಳಮಂ (ಪಂರಾಮಾ. ೫-೬೦); ಕೃತ್ರಿಮ ವಿಹಗಾವಳಿ ಶುಕಪಿಕಮೆನಲಾ ಮಂಡಪಮತಿ ಶೋಭಿಸಿದುದು ನನೆಯ ಸ ರ ಲ ನೀಱನ ಕೇಳೀವನದಂದಮನನುಕರಿಸಿ (ಜಯಕಾ. ೪-೫೦).

[ <ನನೆ₂./ತಮಿ. ನನ್ನೈ, ನಕ್ಕೈ; ಕೊಡ. ಕೊಡ. ನನ್; ತೆಲು. ನನ ]

**ನನೆಕೇರ್** (ನಾ). ಮೊಗ್ಗಿನಿಂದ ನಿರ್ಮಿಸಿದ ಗೋಡೆ: ನನೆಕೇರಿಂ ಕಂಪಿನಕ್ಷಿಂ ಕುಸುಮಿತ ಲತಿಕಾದಂಡಸಂದೋಹದಿಂ . . . ಒಪ್ಪುವ ನವಸುಮನೋ ಮಂಡಪಕ್ಕೆಯ್ದಿಮಂದಳ್ (ಲೀಲಾವ. ೧೧-೫೯). [ ನನೆ₃ + ಕೇರ್₁ ]

**ನನೆಕೊನೆ** (ನಾ). ೧. ಚಿಗುರಿದ ಕುಡಿ; ಅಂಕುರ; ಮೊಳಕೆ: ನನೆಕೊನೆಯ ತಳಿರ ಪೂವಿನ ಬನವುನಿತುಂ ಕಿಱಿಗಳುರೆ ಬೆಂಕಿಯ ಪೊಳ್ದುರ್ವಿನೊಳೆ ಕೊರಗಿರ್ದ ಲತೆಗಳ ಕೊನೆಗೊನೆಯನೆ ದಹನನಳುರ್ದು ಕೊನೆಗೊನೆಗೊಡಂ (ಪಂಪಭಾ. ೫-೮೭); ಇಂದೊ ನಾಳೆಯೊ ಮತ್ತೆ ಮೈಯೆಲ್ಲ ನನೆಕೊನೆಯು

ಫಲೆಯುಂದುಱಿ ನಿಂತರೂ ಒಣಗಿಲ್ಲ ವಸವು (ಕರುಶ್ರಾ. ೪೧-೩೩). ೨. (ಆಲಂ) ಹಿಗ್ಗು ; ಸಂತೋಷ ; ಆನಂದ : ನನಹು ನೆವ್ಮಿತು ಶಿವನನಿತರದ ನನೆಕೊನೆಯ ತೆರಳಿಕೆಯ ತೊಡಚೆಯ ಮನದ ಸಂಚಲವೀಜುವೋದುದು ಕಲಿಧನಂಜಯನ (ಕುವ್ಯಾಆ. ೪-೪೨) ; ಒಂದರಿಂದಿನ್ನೊಂದು ಮನೆಗಿಲ್ಲಿ ನಡೆದರೇನೆ ವಿಜಯಯಾತ್ರೆಯ ನನೆಕೊನೆ ! (ಚಿಂತನ. ೬೭-೪). 'ನನೆಕೊನೆವೋಗು' ಪರಾ.

**ನನೆಕೊನೆಯಾಗು** = ವಿಕಸಿತವಾಗು ; ಅರಳು : ನಲ್ಲನೆ ನಗೆನುಡಿಗಾಱನೆ ಪೆಣ್ಗಲರ್ವಿಲ್ಲನೆ ನುಡಿ ಬಸಂತದೊಳು ಪಲ್ಲವಿಸುತೆ ನನೆಕೊನೆಯಾಯ್ತು ಚಿತ್ರಸುಫ[ಫು]ಲ್ಲವಲ್ಲರಿ ಬಗೆಗಾಱ (ವರ್ಧಚ. ೯-೨) ; ಭರತೇಶ-ಕುಸುಮಮಾಜಿಯುರ ದಿವ್ಯಪ್ರಣಯವು ಸುರತದಲ್ಲಿ ನನೆಕೊನೆಯಾಗುತ್ತದೆ (ಕಸಾಚ. ೩೭೦). [ ನನೆ$_3$ + ಕೊನೆ$_2$ ]

**ನನೆಕೊನೆಯೇರು** 'ನನೆಕೊನೆಯೇಱು' ನೋ.

**ನನೆಕೊನೆಯೇಱು**, ನನೆಕೊನೆಯೇರಂ (ಕ್ರಿ). ಚಿಗುರು ; ಕೊನರು ; ಮೊಳೆ ; ಅಂಕುರಿಸು : ಜನಕಜೆ ವಕ್ತ್ರದೀಪಕಲಿಕಾಕೃತಿಯಿಂ ಪುಗೆ . . . ವರೇಂದ್ರನಂದನಗೆ ಮನೋವಿಕಾರದೊಡನಂಗವಿಕಾರಮಂದೇಂ ಪೊದಟ್ಟುದೋ ನನೆಕೊನೆಯೇಱುವಂತೆ ವನರಾಜಿ ಮಧುಪ್ರಥಮಪ್ರವೇಶದೊಳ್ (ಕುಂರಾಮಾ. ೩-೩೦). **ನನೆಕೊನೆಯೇರು** : ಇಂತಹರ ನೆನಹು ನನೆಕೊನೆಯೇರಿ ದ್ವಾರಶಿಲ್ಪದಿ ಚಿತ್ರವರಳುತಿರೆ, ಎತ್ತ ಹೊರಳಿದರು ನೂತನ ಸೃಷ್ಟಿ (ಶಿಲಮು. ೭೦-೯). [ ನನೆಕೊನೆ + ಏಱು$_1$ (<ಏಱ್$_1$) ]

**ನನೆಕೊನೆವೋಗಿಸು** (ಕ್ರಿ). ೧. ಚಿಗುರು ಮತ್ತು ಹೂವುಗಳಿಂದ ತುಂಬಿರುವಂತೆ ಮಾಡು. ೨. ಸಂತೋಷಗೊಳಿಸು ; ಹರ್ಷಪಡಿಸು : ವನದೊಳು ಚರಿಸಿ ವಸಂತನಾ ವನವ ಭ್ರೋಂಕನೆ ಚಿಗುರೇಱಿಸುವಂತೆ ವನಧಿಮಧ್ಯದ ಧರಣಿಯು ನಿನ್ನ ಸುಳುಹಿಂದ ನನೆಕೊನೆವೋಗಿಸು ನೃಪತಿ (ಭರಚ. ೩೦-೧೩). ೧, ೨ : ಮನಸಿಜಕಲ್ಪಲತಾನಂದನಮನೆ ಬಿಂಕಕ್ಕೆ ಕೊಂಕಿದಬಾಜನಮಂ ನನೆಕೊನೆವೋಗಿಸುತಿರ್ಪುದು ಮನುಜಮನೋಭವ ಭವದ್ವಿಲಾಸವಸಂತಂ (ಯುಕೋಚ. ೩-೩). [ ನನೆಕೊನೆವೋಗು + – ಇಸು$_3$ ]

**ನನೆಕೊನೆವೋಗು** (ಕ್ರಿ). ೧. ಚಿಗುರು ; ಪಲ್ಲವಿಸು ; ಅಂಕುರಿಸು : ನನೆಕೊನೆವೋಯ್ತು ತನ್ನ ನನೆಯಿಂ ಮುದಮುರ್ವಿಗೆ ತನ್ನ ಪುಷ್ಪದಿಂ ಮನಸಿಶಯಂಗೆ ಪುಷ್ಪಶರನೆಂಬ ಪೆಸರ್ ಬೆಳಗಿತ್ತು (ಜಗವಿ. ೧೪-೭೨) : ಮನಸಿಜ ಮತ್ತವಾರಣಮೊ ಕಾಮನ ಕಾರ್ಮುಕಗೇಹಮೋ . . . ನನೆಕೊನೆವೋದ ಮಾಮರನೊ ಪೇಟೆನೆ ರಂಜಿಸಿದತ್ತು ಮಾಮರು (ದಶಕು. ೪-೮೬) ; ಬೀದಿ ಮರಿದುದು ಬಿಂಕ ನನೆಕೊನೆವೋದುದಾಶಾಬೀಜ ಲಜ್ಜೆಯು ಹೋದ ಮೂಗಿಗೆ ಕದಪ ಹೊಯ್ದನು (ಕುವ್ಯಾಕ. ೧-೨೫) ; ನನೆಕೊನೆವೋದ ನವಾಮ್ರದ ನೆಳಲೊಳ್ ಮನಮಂ ತನುವಂ ಬೇರ್ಕೆಯ್ದೊರ್ವಂ ಮುನಿಕುಲತಿಲಕಂ ಯೋಗದೊಳಿರೆ ಕಂಡಂ ಜಯಭೂಮಿವರನು (ಜಯುಕಾ. ೯-೪೦). ೨. ಉಬ್ಬು ; ಉತ್ಸಾಹಿಸು ; ಹಿಗ್ಗು ; ಸಂತೋಷಗೊಳ್ಳು : ಅಂತು ಮೂರ್ಛಾಪ್ರಸಂಗನಾದ ಪನ್ನಗಪತಾಕಂಗೆ ಶಿಶಿರೋಪಚಾರಕ್ರಿಯೆಗಳಂ ಮಾಳ್ಪ ಸಂಜಯನಿರವಂ ತತ್ಪರಿಜನಂ ಕಂಡು ಪೇಟ್ ಗಾಂಧಾರಿ ಮನದೊಳಳ್ಳಿ ಬಳ್ಳಿ ನನೆಕೊನೆವೋಗಿ (ಗದಾಯು. ೩-೭೭ ವ) ; ಪುತ್ರದೋಹಳದಿಂ ಸಮನಿಸಿದುದ್ದೀವನಭಾರ[ವ]ವೆಂಬವರ್ದಿನ ಮಟಿಯಿಂ ಮಡಲ್ತು ನನೆಕೊನೆವೋಗೆ (ಅರ್ಧನೇ. ೧-೯೨ ವ) ; ತನತನಗುರ್ವಿತುಂ ಬಿಡದೆ ಕೊರ್ವಿತೆ ಪರ್ವಿತುಮುರ್ವಿಯೊಳ್ ಕರಂ ನನೆಕೊನೆವೋಗಿ ಮಾಯೆ ಕೊಱಚಾಡದೆ ಮಾಣ್ಬುದೆ ಹಂಪೆಯಾಳ್ದನೇ (ಹಂಪಾಶ.೭೫); ಅನುಪಮಚಿದ್ವನಾರ್ಯರುಗಳ್ ಪಿರಿದುತ್ಸವದಿಂದೆ ಬಂದು ತಜ್ಜನಪತಿಪುತ್ರನಂ ಸಚಿವಪುತ್ರನುಮಂ ನಡೆ ನೋಡಿ ಚಿತ್ತದೊಳ್ ನನೆಕೊನೆವೋಗಿ (ರಾಜಕೀ. ೪-೮೩) ; ನುಡಿಗಬ್ಬದ ಗಬ್ಬದುಬ್ಬರದಿಂ ನನೆಕೊನೆವೋಗಿ (ರಾಮಾಶ್ವ. ೧೩೩-೬).

[ ನನೆಕೊನೆ + ಪೋಗು$_1$ ]

**ನನೆಗಣೆ** (ನಾ). ಹೂವಿನ ಬಾಣ ; ಪುಷ್ಪಬಾಣ ; ಹೂಬಾಣ : ಅಂತು ಶಿರುವಿಂ ಬರ್ದುಂಕಿದ ಕಂತುವ ನನೆಗಣೆಗಳಂತೆವೋಲ್ ನಡೆತಂದರ್ ಸಂತಸದೆ (ಹಂಪಭಾ. ೯-೧೦೦) ; ಬಾಲೆಯ ಕಡೆಗಣ್ನೋಟಮೆ ಸಾಲದೆ ನನೆಗಣೆಗಳೇವುವೆಂದು ಮನೋಜಂ ಶೂಲಿಯ ನೊಸಲುರಿಗಣ್ಣಿಂ ಪೀಲಿಯ ಕಣ್ಣಂಬಂ (ಹಂರಾಮಾ. ೩-೪೪) ; ನನೆಗಣೆಯಂ ಸ್ಮರಂ ಪಡೆದ [ಪೂಗೊ]ಳದಂತೆವೊಲಿರ್ದುದಚ್ಚವಿಂಚಿನ ಸುಲಿಪಲ್ಗಳ್ (ಅರ್ಧನೇ. ೨-೧೪) ; ನನೆಗಣೆ ನಡುಗುಂ ಕಾಮಿಗಳನೆಂಬ ಮಾತಿಲ್ಲಿ ಪುಸಿ ಪರಸ್ತ್ರೀರತರಂ ನನೆಯ ಮೊನೆಯೆಂಬು ಮಲರಲಗಿನಂಬುಮಾ ಬನದೊಳಂರ್ಚಿ ನೋಯಿಪುದು ದಿಟಂ (ವರ್ಧಪು. ೧೧-೩೬) ; ವಸಂತಂ ವಸಂತನಂ ಕಾಮಂ ಕಾಮನಂ ಇಕ್ಷುಚಾಪಂ ಇಕ್ಷುಚಾಪಮಂ ನನೆಗಣೆ ಸಾರ್ವಂತೆ ಪಾರ್ವತಿಯಂ ನವಯೌವನಂ ಸಾರ್ವಲ್ಲಿ (ಗಿರಿಕ. ೪-೭ ವ) ; ಜಕ್ಕುಲಿಪ ಮನದ ನನೆಗಣೆಯನರಸಿಗೆ ನೋಡೆ ಸಕ್ಕಸಮವೆನಿಪ ರೂಹಿನ ಮೋಹನಂ ಜನಿಪ ಚಿಕ್ಕಹರೆಯದ ಬೆಚ್ಚದೆರಳೆಗಣ್ಮರಲ ಪೆಣ್ಮಕ್ಕಳೆಯ್ತಂದರೊಸೆದು (ಪದ್ಮರಾ. ೩-೭೭). [ ನನೆ$_3$ + ಕಣೆ$_1$ ]

**ನನೆಗಣೆಗೊನೆ** (ನಾ). ಹೂಬಾಣಗಳ ತುದಿ ; ಪುಷ್ಪಬಾಣಗಳ ಮೊನೆ: ಆ ನನೆಗಣೆಗೊನೆಯಿಂದುದಯಿಸಿದುಗ್ರಾನಲನೊಳ್ಪುರಿಯೊಳು ತದ್ವಿರಹದ ಮಾನಿನಿ ಕಣ್ಗೆ ವಿರಾಜಿಸಿದಳ್ ಸ್ವಾಹಾವಧುವೆಂಬಂತೆ (ಜಯುಕಾ. ೯-೯೨).

[ ನನೆಗಣೆ + ಕೊನೆ$_2$ ]

**ನನೆಗಣೆದೊಡು** (ಕ್ರಿ). ಪುಷ್ಪಬಾಣವನ್ನು ತೊಡು ; ಹೂಬಾಣವನ್ನು ಹೂಡು : ಕವಿದೆನ್ನನಿಸಲೆಂದು ಶಿರುವಿನೊಳು ನನೆಗಣೆದೊಟ್ಟು ಹದಿವಟ್ಟು ಕಂದರ್ಪನು ಸನ್ನದ್ಧನಾಗಿ ನಿಂದು (ಸೌಂದಪು. ೧೭-೪೩).

[ ನನೆಗಣೆ + ತೊಡು$_1$ ]

**ನನೆಗಣೆಯ** (ನಾ). ಹೂವಿನ ಬಾಣಗಳನ್ನು ಹೊಂದಿದವನು ; ಕಾಮ ; ಮನ್ಮಥ : ನನೆಗಣೆಯನ ಕಣೆಗಳವೊಲು ಗೋಪರಂಗನೆಯರ ನಯನ ಮರೀಚಿ ತನುವಿನೊಳಗೆ ಪಸರಿಸಲಾ ತಾಪಸ ಮನವನಿತ್ತನು ಮನಸಿಜಗೆ (ಅಂಜಚ. ೨-೭೩); ಕಡುಚೆಲ್ವಂ ಪಡೆದನಾವಗಂ ನನೆಗಣೆಯಂ (ಕಬ್ಬಿಕಾ. ೧೩೭) ; ನನೆಗಣೆಯನೊಲಿದರ್ಚಿಸುವ ಮೋಹನದ ಸಿರಿಯೋ ಕಬ್ಬುವಿಲುಗಾಱನೆ ನಲವಿನಾರಾಧಿಸುವ ಮಂತ್ರಾಧಿದೇವತೆಯೋ (ಸಾಳ್ವಭಾ. ೨-೨೫) ; ನನೆಗಣೆಯನ ನೇಹದ ಜಾಳವೊ ಪೇಳೆನೆ ಗಣಿಕಾಜನವೆಸೆದುದು ಸೌವರ್ಣದ ಸೌಧದ ಮುಂಬಿನೊಳು (ಉದ್ಭದೇ. ೪-೧೯). [ ನನೆಗಣೆ + – ಅ$_7$ ]

**ನನೆಗಪ್ಪಡ** (ನಾ). ತೊಯ್ದ ವಸ್ತ್ರ ; ಒದ್ದೆಯಾದ ಬಟ್ಟೆ : ಮನಂದಣಿಯೆ ಚೊಕ್ಕಳದಿಂ ನೀರೊಳಾಡಿ ಮಿಂದು ಬಂದು ತಡಿಯನಡರ್ದು ನನೆಗಪ್ಪಡ ಮನುಟಿದು ಪೊಸಸೀರೆಯಂ ನಿಱಿವಿಡಿದಿಟ್ಟು (ರಾಮಾಶ್ವ. ೦೨೪-೨).

[ನನೆ$_1$ + ಕಪ್ಪಡ]

**ನನೆಗುದಿ**, ನೆನೆಗುದಿ (ನಾ). ೧. ಅರ್ಧ ಬೇಯುವುದು; ಹೆಚ್ಚಾಗಿ ನೆನೆದು ಪೂರ್ತಿ ಬೇಯದಿರುವುದು : ಹೊತ್ತುವುದು ಸರಿಯಹುದು ನನೆಗುದಿಯಹುದು . . . ಒಣಗಿಹುದು ದೋಷವಶನಕ್ಕೆಂಬು ತೆಱನಪ್ಪುದು (ಸೂಪಶಾ. ೩-೧). 'ನೆನೆಗುಂದಿಗೊಳ್' ಪರಾ. ನೆನೆಗುದಿ: ೨. (ಆಲಂ) ಪೇಚು ; ತಳಮಳ : ಆತ ಈ ಕೆಲಸ ಮಾಡಬೇಕೋ ಬೇಡವೋ ಎಂದು ನೆನೆಗುದಿಯಿಂದ ಒದ್ದಾಡುತ್ತಿದ್ದ (ರೂಢಿ).

**ನೆನೆಗುದಿಗೆ ಬೀಳು** = ಅನಿಶ್ಚಿತವಾಗಿರು; ಅನಿರ್ಧಾರವಾಗಿರು; ಬಗೆಹರಿಯದಿರು : ಹೀಗೆ ಪ್ರಣಯ ನೆನೆಗುದಿಗೆ ಬಿದ್ದ ಮೂಲಕ ಕಿಟ್ಟಿ ಕಂಗಾಲಾದನು (ಗಂಮೂಯಿ. ೯೯) : ಸದ್ಯದ ಮಟ್ಟಿಗಂತು ಆ ವಿಲಾಸಭವನದ ನಿರ್ಮಾಣಕಾರ್ಯವು ನೆನೆಗುದಿಗೆ ಬಿದ್ದಿತು (ಸ್ಮೃಲಮಿ. ೩೯) ; ಆಮೇಲೆ ಮಂತ್ರ ಆಂದೋಲನವು ನೆನೆಗುದಿಗೆ ಬಿದ್ದ ಮೇಲೆ ತಂದೆಯ ಒತ್ತಾಯದ ಮೂಲಕ ಕಾಲೇಜು ಸೇರಿದ್ದು (ದಾಸಹು. ೮೪).

[ ನನೆ$_1$ + ಕುದಿ$_2$ ]

**ನನೆಗುದಿಗೊಳ್** (ಕ್ರಿ). ತಳಮಳ ಹೊಂದಂ : ಮನಸಿಜಕರೀಂದ್ರಕಟದೊಳ್ ಸೊನೆ ತೊಟ್ಟನೆ ಪುಟ್ಟುವಂತೆ ವಕುಳಕ್ಕೆ ಪಸುರ್ವನೆ ಪುಟ್ಟೆ ಬಿರಯಿಯೆರ್ದೆಗಳ್ ನನೆಗುದಿ[ಪಾಠಾಂ. ದಿ]ಗೊಂಡವು ಬಸಂತಮಾಸದ ಪುಗಿಲೊಳ್ (ಮಲ್ಲಿಪು. ೩-೧೬). [ ನನೆಗಂದಿ + ಕೊಳ್$_1$ ]

**ನನೆಗೈದುಗಾಱ** (ನಾ). ನನೆಯೆಂಬ ಆಯಂಧವನ್ನು ಹಿಡಿದವನು ; ಮನ್ಮಥ : ನನೆಗೈದುಗಾಱನೆಂದೆನಿಪ ಧೀವರ ದಿವಿಜ ದನುಜ ಮನುಜರ ಧೈರ್ಯಮೆಂಬ ಮತ್ಸ್ಯಂಗಳಂ ತನಗೆ ವಸವಮಾಡಿಕೊಳಲು (ಸೌಂದಪು. ೦೨-೩೨). [ ನನೆ$_3$ + ಕೈದುಗಾಱ (<ಕೆಯ್ದುಕಾಱ) ]

**ನನೆಗೊಂಬು** (ನಾ). ಹೂವುಗಳಿಂದ ತುಂಬಿದ ರೆಂಬೆ,-ಕೊಂಬೆ : ಬಂಡನುಂಡು ನನೆಗೊಂಬುಗಳಿಂ ಮೊರೆದೆಟ್ಟೆ ಭೃಂಗರಝಂಕಾರವೆ ಮಾಟ್ಟುದಾರ ಬಗೆಗಂ . . . ಹರ್ಷಭಾರಮಂ (ಪಂಪಾಭಾ. ೦-೧೦೮) ; ನನೆಗೊಂಬಂ ನೀಳ್ಕೆ ಚಂದ್ರಾತ್ರಪಮೆ ಪುದಿದುದೆಂಬನ್ನೆಗಂ ನೋಡಿ ಚಂದ್ರಾನನೆ ಪೂವಂ ಲೀಲೆಯಿಂದಂ ತಿಱಿಯೆ (ಮಲ್ಲಿಪು. ೬-೬೬) ; ನನೆಗೊಂಬಾಣತಿಮಾಡಿ ಪಾಡುವವೊಲಿರ್ದತ್ತು ಭೃಂಗಾಂಗನಾಧ್ವನಿಯಿಂದಂ (ಸೂಕ್ತಿಸು. ೧೦-೩೦). [ ನನೆ$_3$ + ಕೊಂಬು$_1$ ]

**ನನೆಗೊಯ್** (ಕ್ರಿ). ಹೂವುಗಳನ್ನು ಕೀಳು,-ಬಿಡಿಸು,-ತಿರಿ : ತಗೆದು ನನೆಗೊಯ್ದು ಬಿಡೆ ಮೇಲೆಱಗೆವೆಳದಳಿಗೊಂಬು ಪೋಲ್ತುದಾ ಪೂವಿನ ಸೂಳಿಗೆ ತೊವಲಂ ಪಿಡಿದು ಮಂದಾಳಿಗಳುಲಿಯಿಂ ಪುಯ್ಯಲಿಡುವಶೋಕೆಯ ತ್ಯೆಯಂ (ಚಂದ್ರಪ. ೬-೧೦೦). [ ನನೆ$_3$ + ಕೊಯ್ ]

**ನನೆಗೋಲ್** (ನಾ) = ನನೆಗಣೆ ; ನನೆಗೋಲ್ ನಟ್ಟು ಕೊನರ್ತವೊಲ್ಪುಳಕ ಮುಣ್ಮೆತ್ತಲ್ಲಿ ರಕ್ತಾಂಬುಗಳ್ ಪನಿವಂತೆರ್ದುವು ಘರ್ಮವಾರಿ (ಲೀಲಾವ. ೩-೩೮) ; ಮಿಸುಪನ್ನಿಯ ಪುರ್ವಿನ ಕರ್ವಿಲ್ಲ ನೋಟದ ನನೆಗೋಲ ಲೀಲೆಯೊಳೆ ಸೋಲಿಸುವೆಂ ಜಿತಕಾಲತೂಲಿಯಂ (ಗಿರಿಕ. ೬-೬೬) ; ನನೆಗೋಲ್ಕಬ್ಬಿನಬಿಲ್ಲದಾಳಿಕೊಳಲೇಚಾಮೌರ್ವಿಯೆಂಬರ್ದನೋಜನ ಬಿಲ್ಲಂ (ಅನಂತಪು. ೯-೧೧) ; ಜೊನ್ನೊಡಲಂ ನಿರ್ಮಿಚಿದಪಸಗ್ನಿಯ ತಣ್ಣದಿರಿಂದ ಮೋಹೊ ನೀನುನ್ನನೆಗೋಲ್ಗಳಂ ಸಿಡಿಲ್ಗೆ ಸಾಟಿಯುನಾಗಿಪ ಪಂಚಸಾಯಕಾ (ಶಾಕುಂತ. ೩೨-೫೭). [ ನನೆ$_3$ + ಕೋಲ್$_1$ ]

**ನನೆಗೋಲ** (ನಾ). = ನನೆಗಣೆಯಂ : ನನೆಗೋಲನಂಪಟುಳದಲಿ ಭ್ರಾಂತಿಗೊಂಡಿರ್ದ ವನಚರ ಪೂತ ಸಂಪಗೆಯ ಕೊನೆಗಳ ಮುಱಿದಿಡಲಂಜಿ ತಾಪಸರೆಲೆವನೆಗಾಶಿಯರನಪ್ಪಿದರು (ಮೋಹತ. ೬-೦೫) ; ವಿನಯದಿ ಮಾತಾಡು ಮೆಳರಾಯ ನಿನ್ನಯ ತನಯಳಿಗೋಸುಗ ಬಂದ ಮನೆಯಳಿಯನ ಕೂಡೆ ವಂಚ್ಚಬೇಕೆಂದು ನನೆಗೋಲನಾತ್ಮಜ ನಂಡಿದ (ಮೋಹತ. ೩೫-೨೮). [ ನನೆಗೋಲ್ + - ಅ$_7$ ]

**ನನೆದಂಡೆ** (ನಾ). ಹೂವಿನ ದಿಂಡಂ,-ಮಾಲೆ : ಗಂಡನಿಂದಲೇ ಗಂಳಿದಾಳಿ, ಅರಿಷಣ, ಕುಂಕುಮ, ಮಲ್ಲಿಗೆಯ ನನೆದಂಡೆ (ಕನ್ನಜಾ. ೦೨೨). [ ನನೆ$_3$ + ದಂಡೆ$_1$ ]

**ನನೆದುಱುಗಲ್** (ನಾ). ಹೂವಿನ ಗೊಂಚಲು,-ಗಂಟ್ಟೆ : ನೆಱೆ ಬಸಂತನ ಮದನಶರಕಂದೆಱಕದೋವಿದ ಚಂದಿರ ನನೆದುಱುಗಲೊದವಿದಶೋಕೆಗಳು ಬನದೊಳು ವಿರಾಜಿಪವು (ಸಾಳ್ವಭಾ. ೨-೩). [ ನನೆ$_3$ + ತುಱುಗಲ್ (<ತುಱುಂಗಲ್) ]

**ನನೆದೊಡಿಗೆ** (ನಾ). ಹೂವಿನ ಆಭರಣ,-ಅಲಂಕಾರ : ಇಂತು ಜಲಕ್ರೀಡೆಗೆಂದು ಕೊಳನಂ ಪೊಕ್ಕಲ್ಲಿ ನನೆದೊಡಿಗೆಯ ನಾಯಕಿಯರುಂ ತಿಲಕದಲಲನೆಯರುಂ . . . ಗಿರಿಜೆಯ ಚರಣಕಮಲಕ್ಕೆ ಭರದಿಂದೆಱಗುತ್ತುಂ (ಗಿರಿಕ. ೯-೨೦ ವ). [ ನನೆ$_3$ + ತೊಡಿಗೆ (<ತೊಡುಗೆ) ]

**ನನೆದೋಱು** (ಕ್ರಿ). ಮೊಗ್ಗನ್ನು ಹೊಂದಂ; ಮಂಗುಳಂ ಬಿಡಂ: ಇದಿರೊಳ್ ನನೆದೋಱಿ ವಸಂತದೂತಿಯೆನೆ ತಾನೆ ನೆಗಟ್ಟ ಮಾಧವಿಯೆನೆ ಸಂದದಿರ್ಮುತ್ತೈಯ ಪೂಗೊಂಚಲ ಪುದುವಿನೊಳೆಱಗಿದ ಮದಾಳಿಗಳ್ ಮೞಿದಪ್ಪುವೇ (ಆದಿಪು. ೧೧-೧೦೮) ; ದೇವಿ ನೀಂ ನಡಪಿದೆಳಲತೆ ನನೆದೋಱಿತೆಂದು ಬಿನ್ನವಿಸಿದ ಬಾಲಕಿಯರನಾಭರಣಪ್ರದಾನಾತಿ ಸನ್ಮಾನಂಗಳಿಂ ಸಂತೋಷಂಬಡಿಸುತಿರ್ದಳ್ (ಕಾದಂಬ. ೨೫) ; ನನೆದೋಱಿತ್ತು ವಸಂತದೂತಿ (ಮಲ್ಲಿಪು. ೫-೭) ; ಕಡವಲವೊರ್ತತ್ತು ಪೊಲ್ಲೆ ಮುಗುಳ್ತತ್ತು ಪೊದಟ್ಟು ಪೂಲಂ ಪಸುರ್ತಮಾಸಡಿ ಕುಡಿಯೇಱ ಮುತ್ತೆ ನನೆದೋಱ (ಕುಸುಮಾ. ೬-೦೩) ; ಮರುಗ ಮೊನೆ ನನೆದೋಱಿ ಸುರಗಿ ಜಾಜಿಯ ಸನೆಗಳರಳಿ ಪರಿಮಳದಲೆಸೆಯಲ್ಕೆ (ಹರಿಕಾ. ೩-೩೨) ; ಎಲೆ ಸುಲಿದೆಡೆಗಳ [ಕಣ್]ಕಣ್ಗಲೆಯೆಡೆ ಗಂಟೊಡೆದು ಮೊನಸಿ ನನೆದೋಱಿ[ಪಾಠಾಂ. ಕೊನೆದು] ಮುಗುಳ್ಗಳಲರ್ದು ಮಱಿದುಂಬಿಗಂ ತುಂಬೆಲರ್ಗಂ ಮುದ್ದಾದುವಲ್ಲಿ ಪೊಸ ಮಲ್ಲಿಗೆಗಳ್ (ಯಶೋಚ. ೪-೫). [ ನನೆ$_3$ + ತೋಱು ]

**ನನೆನಾಱು** (ಕ್ರಿ). ಹೂವಿನಿಂದ ಗಮಗಮಿಸಂ,-ಸಂಪಾಸನೆ ಬೀರಂ : ನನೆಯೆಳಸಂಪನೆತ್ತಿಯುಮುಣಂ ನನೆನಾಱುದರಲ್ದ ನೇಕಕೋಕನದವನಂಗಳೊಳ್ ಸುಟಿದು ತಣ್ಣಸವಾಗದೆ . . . ತೀಡಿದುದು ತೆಂಕಣಗಾಳಿ ವಸಂತಮಾಸದೊಳ್ (ಪಂಪಭಾ. ೫-೪೧). [ ನನೆ$_3$ + ನಾಱು$_1$ ]

**ನನೆಬಿಜ್ಜಣಿಗೆ** (ನಾ). ಹೂವಿನಿಂದ ಮಾಡಿದ ಬೀಸಣಿಗೆ : ನನೆಬಿಜ್ಜಣಿಗೆಯ ತಣ್ಣೆಲರಿನಾಱಿದುದಯೆನ್ನ ತನುತಾಪ (ಹರಿಕಾ. ಪರಿ. ೨೧೦). [ ನನೆ$_3$ + ಬಿಜ್ಜಣಿಗೆ ]

**ನನೆಮುಗುಳ್** (ನಾ). ಎಳೆಯ ಮೊಗ್ಗು ; ಹೊಸ ಮೊಗ್ಗು : ನನೆಮುಗು[ಪಾಠಾಂ. ಗು]ಳ್ ಕೊನೆಮುಗಳ್ಬಿರಿದಿರೆ ಮುಗುಳ್ಗಳಂ ತನಿಗಂಪು ತೀವಿರ್ದ ಪೊಚ್ಚಪೊಸಪೂಗಳಂ ಕೊಂಡು ಕುಕಿಲಿಱಿವುತಂ ನಡೆತಂದು (ಪುಷ್ಪರ. ಹ. ೫೩೩-೨೬) ; ನನೆಮುಗುಳ್ ನನೆಕುಸುಮ ವಸುಗಾಯ್ . . . ತೊನೆದು ತೂಗುವ ಫಲಭರಂಗಳ ಘನತರದ ಸಹಕಾರ ಸಹ ಸುರವನಕದಂಬಕ ವೆಸೆದುದಿದಿರಲಿ ಕಪಿಕುಲೇಶ್ವರನ (ತೊರಣಾ. ೫-೩ ೦೪). [ ನನೆ$_3$ + ಮುಗುಳ್$_2$ ]

**ನನೆಮೊನೆ** (ನಾ). ಮೊಗ್ಗಿನ ತುದಿ,-ಅಗ್ರಭಾಗ : ತೋಳಿನೊಳೊಱಗಿ ದಿನಿಯಳ ಕರ್ಣಪೂರದೊಳೆಱಿಯ ಕತ್ತುರಿರಸವ ನನೆಮೊನೆಯಿಂದ ಲೇಖಿಸಿದ (ಸಾಳ್ವಭಾ. ೦೬-೦).

**ನನೆಮೊನೆಯಾಗು** = ಚಿಗುರು : ನನೆಮೊನೆಯಾಗಿ ಬಂದುವೆಳಮಾವೆಳಮಾವಿನ ಮುಂಚಿ ಬಂದ ಪೂವಿನ ಪೊಸಗೊಂಚಲೊಪ್ಪಿದುವು (ಶಾಂತಿಪು. ೬-೧೨೫). [ ನನೆ$_3$ + ಮೊನೆ$_1$ ]

**ನನೆಯಂಬ** (ನಾ). = ನನೆಗಣೆಯಂ : ನನೆಯಂಬಂ ತಾವರೆಪೂವಿನ ಕೈಪೊಡೆಯಿಂ ಮನೋಭವಂ ತೊಡೆವವೊಲಾ ವನಿತೆಯ ಸಬಾಷ್ಪಲೋಚನ ಮನವನಿಪತಿ ಶೋಣಪಾಣಿತಳದಿಂ ತೊಡೆದಂ (ಮಲ್ಲಿಪು. ೯-೦೬) ; ಹೂವಿನ ಬಿಲ್ಲನೊಚ್ಚತಂಗೊಂಡರ್ಚಿಸುತ್ತಿರ್ಪ ನಿಡುಪುರ್ವಿನ ನೀಱೆಯರಿಂ ನನೆಯಂಬಂ ಕೆಯ್ಗೆಯ್ದು ಸವಿನೋಟದ ಸಾಧಾರಣೆಯರಿಂ (ಗಿರಿಕ. ೬-೧೧ ವ) ; ನೀನೀ ಪೂವಿನ ಪೊಟಲೊಳ್ ನನೆಯಂಬನೆಂಬರಸಾದೆ (ಕಬ್ಬಿಗಕಾ. ೩೦೪) ; ಸೊಸೆವೆಮೊಗಾಂತ ಕತ್ತುರಿಗಂಧಿ ಬರೆದಳು ನನೆಯಂಬನ ಚಿತ್ರಪಟವ ವಿನಯದೆ ಕೈಕೊಂಡು ಬಂದಳು ಸ್ಮರವರತನಯನ ಶಯನಸ್ಥಳಕೆ (ಮೋಹತ. ೩೯-೫೩). [ ನನೆಯಂಬು + - ಅ$_7$ ]

**ನನೆಯಂಬು** (ನಾ). = ನನೆಗಣೆ : ಮೊನೆಯಂಬುಗಳೊಳೆ ಪುಣ್ಣಪಸ ನಿಬರುಮಂ ಕಿಱಿದು ಬೇಗದಿಂ ಹರಿಗನದರ್ಕನಗೆಡೆವೇಟ್ಟುಮೆಂ ಎಂಬವೊಲನಿಬರುಮಂ ಪೂಣ್ದನ[ತಸಂ] ನನೆಯಂಬುಗಳಿಂ (ಪಂಪಭಾ. ೩-೫೨) ; ನನೆಯಂಬಂ ಮಿಗೆ ಕಣ್ಣಳಿಸ್ ಮಕರಮಂ ಕ್ರೋಡಧ್ವಜಂ ಪೋಲೆ (ಗದಾಯು. ೦-೬) ; ಮನೋಜಂ ನನೆಯಂಬಿನಿಂದಿಸಿ ತದಸ್ತ್ರಾಘಾತಜಾತಾನಿಲಂ ನಿವಿರ್ದೋರಂತಳರಲ್ಕೆ ಹೃತ್ಕಮಟಿಯ ನಾ ಕಂದರ್ಪರಾಜೇಂದ್ರನಾ

